KA / BG-GPO / 2515 / WPP-47 / 2009-2011

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೬ | ಬೆಂಗಳೂರು, ಗುರುವಾರ, ಆಗಸ್ಟ್ ೪, ೨೦೧೧, (ಶ್ರಾವಣ ೧೩, ಶಕ ವರ್ಷ ೧೯೩೩) | ಸಂಚಿಕೆ ೩೧ |
|---|---|---|

## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಬೆಳಗಾಂ ಜಿಲ್ಲೆ, ಹುಕ್ಕೇರಿ ತಾಲ್ಲೂಕಿನ ಕಮತನೂರು ಸಣ್ಣ ನೀರಾವರಿ ಕೆರೆಯ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಂಡ ಜಮೀನುಗಳಿಗೆ ಸಿವಿಲ್ ನ್ಯಾಯಾಲಯದ ಆದೇಶದಂತೆ ಹೆಚ್ಚಿನ ಪರಿಹಾರ ಪಾವತಿಸುವ ಬಗ್ಗೆ.

**ಓದಲಾಗಿದೆ :**

1. ದಿನಾಂಕ 23–11–2010ರ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರ ಪತ್ರ ಸಂಖ್ಯೆ: ಮುಇಂ/ಸನ/(ಉ)ನ/ಬಿಜಾ/ಭೂಸ್ವಾಪ್ರ/2010–11/6190.
2. ಸರ್ಕಾರದ ಆದೇಶ ಸಂಖ್ಯೆ: ಸನೀಇ 185 ಭೂಸ್ವಾಪ್ರ 2006, ದಿನಾಂಕ 22–01–2007.

**ಪ್ರಸ್ತಾವನೆ :**

ಬೆಳಗಾಂ ಜಿಲ್ಲೆ, ಹುಕ್ಕೇರಿ ತಾಲ್ಲೂಕಿನ ಕಮತನೂರು ಸಣ್ಣ ನೀರಾವರಿ ಕೆರೆಯ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಕಮತನೂರು ಗ್ರಾಮದ ಸ.ನಂ.ಗಳ ಜಮೀನುಗಳಿಗೆ ಹುಕ್ಕೇರಿ ಸಿವಿಲ್ ನ್ಯಾಯಾಲಯವು (ಹಿರಿಯ ವಿಭಾಗ) ನೀಡಿದ ಆದೇಶದಂತೆ ಹೆಚ್ಚುವರಿ ಪರಿಹಾರ ಪಾವತಿಸಲು ಅನುದಾನ ಬಿಡುಗಡೆ ಮಾಡುವಂತೆ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಮೇಲೆ ಓದಲಾದ ದಿನಾಂಕ 23–11–2010ರ ಪತ್ರದಲ್ಲಿ ಕೋರಿದ್ದಾರೆ.

ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರ ಅಧಿಸೂಚನೆ ದಿನಾಂಕ 29–12–94ರ ಪ್ರಕಾರ ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳ ಭೂಮಾಲೀಕರು ದಿನಾಂಕ 18–09–98 ರಂದು ರಚಿಸಿದ ಐತೀರ್ಪಿನಂತೆ ಪರಿಹಾರ ಪಡೆದು, ಹೆಚ್ಚಿನ ಪರಿಹಾರಕ್ಕಾಗಿ ಭೂಸ್ವಾಧೀನ ಕಾಯ್ದೆ ಕಲಂ 18(1)ರಡಿ ಹುಕ್ಕೇರಿ ಸಿವಿಲ್ ನ್ಯಾಯಾಲಯ (ಹಿರಿಯ ವಿಭಾಗ)ದಲ್ಲಿ ಎಲ್.ಎ.ಸಿ. ಸಂಖ್ಯೆ: 130/01 ಮತ್ತು 131/01ನ್ನು ಸಲ್ಲಿಸಿದ್ದು, ಸಿವಿಲ್ ನ್ಯಾಯಾಲಯವು ಕ್ರಮವಾಗಿ ದಿನಾಂಕ 17–12–04 ಮತ್ತು 27–06–05 ರಂದು ನೀಡಿರುವ ಆದೇಶದಲ್ಲಿ ಈ ಜಮೀನಿನ ಪ್ರತಿ ಎಕರೆಗೆ ರೂ. 2.00 ಲಕ್ಷ ಮಾರುಕಟ್ಟೆ ಬೆಲೆಯನ್ನು ನಿಗದಿಪಡಿಸಿ, ಮತ್ತಿತರ ಶಾಸನಬದ್ಧ ಸವಲತ್ತುಗಳೊಂದಿಗೆ ಪಾವತಿಸಲು ಆದೇಶಿಸಿದೆ.

ಸಿವಿಲ್ ನ್ಯಾಯಾಲಯದ ತೀರ್ಪಿನಂತೆ ಪಾವತಿಸಬೇಕಾದ ಬಾಕಿ ಪರಿಹಾರ ಮೊತ್ತದ ವಿವರ ಕೆಳಕಂಡಂತಿದೆ:

| ಕ್ರ.ಸಂ. | ಎಲ್ಎಸಿ | ಎಂಎಫ್ಎ | ಕಮತನೂರ ಗ್ರಾಮದ ಸ.ನಂ. | ವಿಸ್ತೀರ್ಣ ಎ–ಗುಂ | ಪರಿಹಾರ ಮೊತ್ತ (ರೂ.ಗಳಲ್ಲಿ) |
|---|---|---|---|---|---|
| 1 | 130/01 | 4708/05 | 305/9 | 0–20 | 5,30,651–00 |
| 2 | 131/01 | 5446/06 | 305/17 | 0–27 | |
| | | | | ಒಟ್ಟು | 5,30,651–00 |

ಈ ತೀರ್ಪಿನ ವಿರುದ್ಧ ಸಹಾಯಕ ಆಯುಕ್ತರು, ಬೆಳಗಾವಿ ಉಪ ವಿಭಾಗ, ಬೆಳಗಾವಿ ಇವರು ಕರ್ನಾಟಕ ಉಚ್ಚ ನ್ಯಾಯಾಲಯದ ಸಂಚಾರಿ ಪೀಠ, ಧಾರವಾಡ ಇಲ್ಲಿ ಮೇಲ್ಮನವಿ ಎಂ.ಎಫ್.ಎ. ಸಂಖ್ಯೆ: 4708/05 ಮತ್ತು 5446/06ಗಳನ್ನು ಸಲ್ಲಿಸಿದ್ದು, ನ್ಯಾಯಾಲಯವು ಅವುಗಳನ್ನು ದಿನಾಂಕ 03–10–08 ಮತ್ತು 24–11–08ರಂದು ವಜಾ ಮಾಡಿದೆ.

ಈ ಆದೇಶದ ವಿರುದ್ಧ ಮೇಲ್ಮನವಿ ಸಲ್ಲಿಸಲು ಅರ್ಹವಲ್ಲವೆಂದು ಕಂದಾಯ ಇಲಾಖೆಯು ಪತ್ರ ಸಂಖ್ಯೆ: ಲಾ 17 ಎಲ್‌ಬಿಎಸ್ 2009, ದಿನಾಂಕ 12–01–2009 ಮತ್ತು ಸಂಖ್ಯೆ:ಲಾ 216 ಎಲ್‌ಬಿಎಸ್ 2009, ದಿನಾಂಕ 27–02–09ರಲ್ಲಿ ಅಭಿಪ್ರಾಯ ನೀಡಿದೆ.

ಎಲ್‌ಎಸಿ. ಸಂಖ್ಯೆ: 130/01 (ಎಂಎಫ್‌ಎ 4708/05) ಪ್ರಕರಣದಲ್ಲಿ ಶೇ. 50ರಷ್ಟು ಮೊತ್ತ ರೂ. 3,90,134/–ಗಳನ್ನು ಠೇವಣಿ ಮಾಡಲು ಈಗಾಗಲೇ ಮೇಲೆ (2)ರಲ್ಲಿ ಓದಲಾದ ದಿನಾಂಕ 22–01–07ರ ಸರ್ಕಾರದ ಆದೇಶದಲ್ಲಿ ಅನುಮೋದನೆ ನೀಡಲಾಗಿದೆ.

ಮೇಲ್ಕಂಡ ಎಲ್ಲಾ ಅಂಶಗಳನ್ನು ಪರಿಶೀಲಿಸಿ, ಸರ್ಕಾರವು ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸನೀಇ 155 ಭೂಸ್ವಾಪ್ರ 2010, ಬೆಂಗಳೂರು, ದಿನಾಂಕ : 20–05–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ ಬೆಳಗಾಂ ಜಿಲ್ಲೆ, ಹುಕ್ಕೇರಿ ತಾಲ್ಲೂಕಿನ ಕಮತನೂರು ಸಣ್ಣ ನೀರಾವರಿ ಕೆರೆಯ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಪ್ರಸ್ತಾವನೆಯಲ್ಲಿ ವಿವರಿಸಿದ ಜಮೀನುಗಳಿಗೆ ಸಿವಿಲ್ ನ್ಯಾಯಾಲಯವು ಎಲ್.ಎ.ಸಿ. ಪ್ರಕರಣಗಳಲ್ಲಿ ನೀಡಿರುವ ಆದೇಶದಂತೆ ರೂ. 5,30,651–00ಗಳ (ಐದು ಲಕ್ಷದ ಮೂವತ್ತು ಸಾವಿರದ ಆರುನೂರ ಐವತ್ತೊಂದು ರೂ.ಗಳು ಮಾತ್ರ) ಪರಿಹಾರ ಪಾವತಿಸಲು ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಅನುಮೋದನೆ ನೀಡಿದೆ.

1. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತಃಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.
2. ಹೆಚ್ಚುವರಿ ಪರಿಹಾರಧನದ ಪಾವತಿಗೆ ಮೊದಲು ಜಮೀನಿನ ಹಕ್ಕುದಾರಿಕೆ ಬಗ್ಗೆ ಖಚಿತಪಡಿಸಿಕೊಂಡು ಪಾವತಿಸತಕ್ಕದ್ದು.
3. ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಸಂಬಂಧಿಸಿದ ಸಹಾಯಕ ಕಾರ್ಯಪಾಲಕ ಇಂಜಿನಿಯರ್‌ರವರು ವರ್ಗಾವಣೆ ಬಗ್ಗೆ ಕೂಡಲೇ ಕ್ರಮ ಕೈಗೊಳ್ಳತಕ್ಕದ್ದು.

ಈ ವೆಚ್ಚವನ್ನು 2011–12ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ "4702–00–800–1–00–132–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ ಬಂಡವಾಳ ವೆಚ್ಚಗಳು" ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ರೂ. 5,30,651–00 ಗಳನ್ನು ಹಂಚಿಕೆ ಮಾಡಿ ಬಿಡುಗಡೆ ಮಾಡಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಸಿ 2010, ದಿನಾಂಕ 20–10–10ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಅಧಿಕಾರ ಪ್ರತ್ಯಾಯೋಜನೆ ಪ್ರಕಾರ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಗೋಪಾಲ್**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 1385 ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಗುಲ್ಬರ್ಗಾ ಜಿಲ್ಲೆ, ಚಿಂಚೋಳಿ ತಾಲ್ಲೂಕು ಕೊಡ್ಲಿ ಅಲ್ಲಾಪುರ ಸಣ್ಣ ನೀರಾವರಿ ಕೆರೆ ನಿರ್ಮಾಣ ಕಾಮಗಾರಿಗಾಗಿ ಸ್ವಾಧೀನಪಡಿಸಿಕೊಂಡ ಜಮೀನುಗಳಿಗೆ ನ್ಯಾಯಾಲಯದ ಆದೇಶಾನುಸಾರ ಹೆಚ್ಚುವರಿ ಪರಿಹಾರ ಪಾವತಿಸುವ ಬಗ್ಗೆ.

**ಓದಲಾಗಿದೆ :** **1.** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ಉತ್ತರ) ವಲಯ, ಬಿಜಾಪುರ ಇವರ ಪತ್ರ ಸಂಖ್ಯೆ: ಮುಇಂ/ಸನೀ(ಉ)ವ/ಬಿಜಾ/ಭೂಸ್ವಾಪ್ರ/2010–11/4119. ದಿನಾಂಕ 19–07–10.

**2.** ಸರ್ಕಾರದ ಆದೇಶ ಸಂಖ್ಯೆ: ಸನೀಇ 75 ಭೂಸ್ವಾಪ್ರ 2008, ದಿನಾಂಕ 07–11–2008.

**ಪ್ರಸ್ತಾವನೆ :**

ಗುಲ್ಬರ್ಗಾ ಜಿಲ್ಲೆ, ಚಿಂಚೋಳಿ ತಾಲ್ಲೂಕು ಕೊಡ್ಲಿ ಅಲ್ಲಾಪುರ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಂಡ ಜಮೀನುಗಳಿಗೆ ನ್ಯಾಯಾಲಯದ ತೀರ್ಪಿನನುಸಾರ ಹೆಚ್ಚುವರಿ ಪರಿಹಾರ ಪಾವತಿಸಲು ರೂ. 75,30,551–00 ಗಳನ್ನು ಬಿಡುಗಡೆ ಮಾಡುವಂತೆ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ಉತ್ತರ) ವಲಯ, ಬಿಜಾಪುರ ಇವರು ಮೇಲೆ ಕ್ರಮಾಂಕ (1)ರಲ್ಲಿ ಓದಲಾದ ದಿನಾಂಕ 19–07–2010ರ ಪತ್ರದಲ್ಲಿ ಕೋರಿರುತ್ತಾರೆ.

ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರಡಿ ಅಧಿಸೂಚನೆಯನ್ನು ದಿನಾಂಕ 04–05–1995 ರಂದು ಹೊರಡಿಸಲಾಗಿದೆ. ಭೂಸ್ವಾಧೀನಾಧಿಕಾರಿಗಳು ದಿನಾಂಕ 25–06–1997 ರಂದು ರಚಿಸಿದ್ದ ಜಮೀನಿನ ಮಾರುಕಟ್ಟೆ ಬೆಲೆಯನ್ನು ಪ್ರತಿ ಎಕರೆ ಖುಷ್ಕಿ ಜಮೀನಿಗೆ ರೂ. 15,000–00 ಮತ್ತು ತರಿ ಜಮೀನಿಗೆ ರೂ. 20,000.00 ಗಳನ್ನು ನಿಗದಿಪಡಿಸಿದ್ದಾರೆ.

ಭೂಸ್ವಾಧೀನಕ್ಕೊಳಪಟ್ಟ ಕೊಡ್ಲಿ ಅಲ್ಲಾಪುರ ಗ್ರಾಮದ ಜಮೀನುಗಳ ಭೂಮಾಲೀಕರು ಭೂಸ್ವಾಧೀನಾಧಿಕಾರಿಗಳು ರಚಿಸಿದ ಐತೀರ್ಪಿನಂತೆ ಹಣ ಪಡೆದು ಇನ್ನೂ ಹೆಚ್ಚಿನ ಪರಿಹಾರ ನೀಡುವಂತೆ ಭೂಸ್ವಾಧೀನ ಕಾಯ್ದೆ 1894ರ ಕಲಂ 18(1)ರಡಿ ಚಿಂಚೋಳಿ (ಹಿರಿಯ ಶ್ರೇಣಿ), ಸಿವಿಲ್ ನ್ಯಾಯಾಲಯದಲ್ಲಿ ಎಲ್.ಎ.ಸಿ. ಸಂಖ್ಯೆ:1/2007 ಮತ್ತು 2/2007ನ್ನು ಸಲ್ಲಿಸಿದ್ದು, ಸಿವಿಲ್ ನ್ಯಾಯಾಲಯವು ದಿನಾಂಕ 16–11–2007 ರಂದು ನೀಡಿರುವ ಆದೇಶದಲ್ಲಿ ಈ ಜಮೀನಿನ ಮಾರುಕಟ್ಟೆ ಬೆಲೆಯನ್ನು ಪ್ರತಿ ಎಕರೆಗೆ ರೂ. 90,000–00 ಗಳನ್ನು ನಿಗದಿ ಮಾಡಿದೆ. ಸಿವಿಲ್ ನ್ಯಾಯಾಲಯದ ತೀರ್ಪಿನ ವಿರುದ್ಧ ಮೇಲ್ಮನವಿ ಸಲ್ಲಿಸುವ ಅಗತ್ಯವಿಲ್ಲವೆಂದು ಕಂದಾಯ ಇಲಾಖೆಯು ಅಭಿಪ್ರಾಯ ನೀಡಿದ್ದು, ಅದರನ್ವಯ ಮೇಲೆ ಓದಲಾದ (2)ರ ಸರ್ಕಾರಿ ಆದೇಶದಲ್ಲಿ ಹೆಚ್ಚುವರಿ ಪರಿಹಾರ ರೂ 1,21,39,266–00 ಗಳನ್ನು ಬಿಡುಗಡೆ ಮಾಡಿರುತ್ತದೆ. ಸಿವಿಲ್ ನ್ಯಾಯಾಲಯದ ತೀರ್ಪಿನಂತೆ ಪರಿಹಾರ ಪಡೆದ ಭೂಮಾಲೀಕರು ಇನ್ನೂ ಹೆಚ್ಚಿನ ಪರಿಹಾರಕ್ಕಾಗಿ ಉಚ್ಚ ನ್ಯಾಯಾಲಯದಲ್ಲಿ ಎಂ.ಎಫ್.ಎ. ಸಂಖ್ಯೆ: 1852/2008 ಮತ್ತು 2010/08ನ್ನು ದಾಖಲಿಸಿದ್ದು, ಉಚ್ಚ ನ್ಯಾಯಾಲಯವು ರೂ. 1,29,240–00 ಗಳಿಗೆ ಹೆಚ್ಚಿನ ಪರಿಹಾರ ಧನ ಪಾವತಿಸುವಂತೆ ತೀರ್ಪು ನೀಡಿದೆ.

(ರೂ.ಗಳಲ್ಲಿ)

| ಕ್ರ.ಸಂ. | ಎಲ್.ಎ.ಸಿ. ಸಂಖ್ಯೆ | ಎಂ.ಎಫ್.ಎ. ಸಂಖ್ಯೆ | ಕೂಡ್ಲಿ ಅಲ್ಲಾಪುರ ಗ್ರಾಮದ ಸರ್ವೆ.ನಂ. | ವಿಸ್ತೀರ್ಣ ಎ-ಗುಂ | ಪರಿಹಾರ ಮೊತ್ತ |
|---|---|---|---|---|---|
| 1 | 1/07 | 2014/08 | 37 | 9–00 | 1762330 |
| 2 | 2/07 | 1852/08 | 33.34 | 29–22 | 5768221 |
| | | | | ಒಟ್ಟು | 7530551 |

ಈ ತೀರ್ಪಿನ ವಿರುದ್ಧ ಮೇಲ್ಮನವಿ ಸಲ್ಲಿಸುವ ಅಗತ್ಯವಿಲ್ಲವೆಂದು ಕಾನೂನು ಇಲಾಖೆಯ ಪತ್ರ ಸಂಖ್ಯೆ: ಲಾ 1713 ಎಲ್.ಎಸ್.ಪಿ. 2008, ದಿನಾಂಕ 25–11–2008ರಲ್ಲಿ ಅಭಿಪ್ರಾಯ ನೀಡಿರುತ್ತದೆ. ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸನೀಇ 123 ಭೂಸ್ವಾಪ್ರ 2010, ಬೆಂಗಳೂರು, ದಿನಾಂಕ : 19–05–2011**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳಿಂದ ಗುಲ್ಬರ್ಗಾ ಜಿಲ್ಲೆ, ಚಿಂಚೋಳಿ ತಾಲ್ಲೂಕು ಕೂಡ್ಲಿ ಅಲ್ಲಾಪುರ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಂಡ ಕೂಡ್ಲಿ ಅಲ್ಲಾಪುರ ಗ್ರಾಮಕ್ಕೆ ಸೇರಿದ ಮೇಲ್ಕಂಡ ಸರ್ವೆ ನಂಬರ್‌ಗಳ ಜಮೀನುಗಳಿಗೆ ನ್ಯಾಯಾಲಯವು ನೀಡಿದ ತೀರ್ಪಿನಂತೆ ಹಾಗೂ ಭೂಸ್ವಾಧೀನ ಕಾಯ್ದೆಯಲ್ಲಿಯ ಸೂಚನೆಗಳಂತೆ ಲೆಕ್ಕಹಾಕಿದ ಪರಿಹಾರ ಧನ ಮೊತ್ತ ರೂ. 75,30,551–00 (ಎಪ್ಪತ್ತೈದು ಲಕ್ಷದ ಮೂವತ್ತು ಸಾವಿರದ ಐದು ನೂರು ಐವತ್ತೊಂದು ರೂಪಾಯಿಗಳು ಮಾತ್ರ) ಗಳನ್ನು ಪಾವತಿಸಲು ಸರ್ಕಾರವು ಅನುಮೋದನೆ ನೀಡಿದೆ. ಈ ಕೆಳಕಂಡ ಷರತ್ತಿಗೊಳಪಟ್ಟು ಅನುಮೋದನೆ ನೀಡಿದೆ.

1. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತಃಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.
2. ಹೆಚ್ಚುವರಿ ಪರಿಹಾರ ಧನದ ಪಾವತಿಗೆ ಮೊದಲು ಜಮೀನಿನ ಹಕ್ಕುದಾರಿಕೆ ಬಗ್ಗೆ ಖಚಿತಪಡಿಸಕೊಂಡು ಪಾವತಿಸತಕ್ಕದ್ದು.
3. ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಸಂಬಂಧಿಸಿದ ಸಹಾಯಕ ಕಾರ್ಯಪಾಲಕ ಇಂಜಿನಿಯರ್‌ರವರು ವರ್ಗಾವಣೆ ಬಗ್ಗೆ ಕೂಡಲೇ ಕ್ರಮ ಕೈಗೊಳ್ಳತಕ್ಕದ್ದು.

ಈ ವೆಚ್ಚವನ್ನು 2011–12ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ "4702–00–800–1–00–132–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ ಬಂಡವಾಳ ವೆಚ್ಚಗಳು" ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ರೂ. 75,30,551–00 ಗಳನ್ನು ಹಂಚಿಕೆ ಮಾಡಿ ಬಿಡುಗಡೆ ಮಾಡಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 01 ಟಿಎಫ್‌ಪಿ 2010, ದಿನಾಂಕ 20–10–2010ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದ ಪ್ರತ್ಯಾಯೋಜನೆ ಪ್ರಕಾರ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಗೋಪಾಲ್**

ಸರ್ಕಾರದ ಅಧೀನ ಕಾರ್ಯದರ್ಶಿ

ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

ಪಿ.ಆರ್. 1386

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಬೆಳಗಾಂ ಜಿಲ್ಲೆ, ಹುಕ್ಕೇರಿ ತಾಲ್ಲೂಕಿನ ಕಮತನೂರು ಸಣ್ಣ ನೀರಾವರಿ ಕೆರೆಯ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಂಡ ಜಮೀನುಗಳಿಗೆ ಸಿವಿಲ್ ನ್ಯಾಯಾಲಯದ ಆದೇಶದಂತೆ ಹೆಚ್ಚಿನ ಪರಿಹಾರ ಪಾವತಿಸುವ ಬಗ್ಗೆ.

**ಓದಲಾಗಿದೆ :** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರ ಪತ್ರ ಸಂಖ್ಯೆ: ಮುಇಂ/ಸನೀ(ಉ)ವ/ಬಿಜಾ/ಭೂಸ್ವಾಪ್ರ/2009–10/893. ದಿನಾಂಕ 9–02–10.

**ಪ್ರಸ್ತಾವನೆ :**

ಬೆಳಗಾಂ ಜಿಲ್ಲೆ, ಹುಕ್ಕೇರಿ ತಾಲ್ಲೂಕಿನ ಕಮತನೂರು ಸಣ್ಣ ನೀರಾವರಿ ಕೆರೆಯ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಕಮತನೂರು ಗ್ರಾಮದ ಸ.ನಂ.ಗಳ ಜಮೀನುಗಳಿಗೆ ಹುಕ್ಕೇರಿ ಸಿವಿಲ್ ನ್ಯಾಯಾಲಯವು (ಹಿರಿಯ ವಿಭಾಗ) ನೀಡಿದ ಆದೇಶದಂತೆ ಹೆಚ್ಚುವರಿ ಪರಿಹಾರ ಪಾವತಿಸಲು ರೂ. 22,81,879/– ಅನುದಾನ ಬಿಡುಗಡೆ ಮಾಡುವಂತೆ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಮೇಲೆ ಓದಲಾದ ದಿನಾಂಕ 09–02–10ರ ಪತ್ರದಲ್ಲಿ ಕೋರಿದ್ದಾರೆ.

ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರ ಅಧಿಸೂಚನೆ ದಿನಾಂಕ 20–08–1992ರ ಪ್ರಕಾರ ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳಿಗೆ ಭೂಸ್ವಾಧೀನಾಧಿಕಾರಿಗಳು ದಿನಾಂಕ 28–03–95 ರಂದು ರಚಿಸಿದ ಐತೀರ್ಪಿನಂತೆ ಹಣ ಪಡೆದ ಭೂಮಾಲೀಕರು ಹೆಚ್ಚಿನ ಪರಿಹಾರಕ್ಕಾಗಿ ಭೂಸ್ವಾಧೀನ ಕಾಯ್ದೆ ಕಲಂ 18(1)ರಡಿ ಹುಕ್ಕೇರಿ ಸಿವಿಲ್ ನ್ಯಾಯಾಲಯ (ಹಿರಿಯ ವಿಭಾಗ)ದಲ್ಲಿ ಎಲ್.ಎ.ಸಿ. ಪ್ರಕರಣ ಸಂಖ್ಯೆ: 77/01 ಮತ್ತು 82/01ನ್ನು ದಾಖಲಿಸಿದ್ದು, ಈ ಪ್ರಕರಣಗಳಲ್ಲಿ ಸಿವಿಲ್ ನ್ಯಾಯಾಲಯ ಕ್ರಮವಾಗಿ ದಿನಾಂಕ 20–11–08 ಮತ್ತು 29–11–08 ರಂದು ನೀಡಿರುವ ಆದೇಶದಲ್ಲಿ ಪ್ರತಿ ಎಕರೆಗೆ ರೂ. 2.00 ಲಕ್ಷಗಳ ಬೆಲೆಯನ್ನು ನಿಗದಿಪಡಿಸಿದೆ.

| ಕ್ರ.ಸಂ. | ಎಲ್.ಎ.ಸಿ. | ಸ.ನಂ. | ವಿಸ್ತೀರ್ಣ ಎ–ಗುಂ | ಪರಿಹಾರ ಮೊತ್ತ (ರೂ.ಗಳಲ್ಲಿ) |
|---|---|---|---|---|
| 1 | 77/01 | 191/3, 191/4 | 1–14 | 1203311 |
| 2 | 82/01 | 293/3, 293/10 | 0–32 | 713073 |
| | | | ಒಟ್ಟು | 1916384 |

ಈ ಆದೇಶದ ವಿರುದ್ಧ ಮೇಲ್ಮನವಿ ಸಲ್ಲಿಸಲು ಅರ್ಹವಲ್ಲವೆಂದು ಕಂದಾಯ ಇಲಾಖೆಯು ಪತ್ರ ಸಂಖ್ಯೆ: ಆರ್‌ಡಿ 919 ಎಲ್‌ಸಿಬಿ 2009 ಮತ್ತು ಆರ್‌ಡಿ 867 ಎಲ್‌ಸಿಬಿ 2009, ದಿನಾಂಕ 06–04–2009 ರಲ್ಲಿ ಅಭಿಪ್ರಾಯ ನೀಡಿದೆ.

ಮೇಲ್ಕಂಡ ಎಲ್ಲಾ ಅಂಶಗಳನ್ನು ಪರಿಶೀಲಿಸಿ, ಸರ್ಕಾರವು ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸನೀಇ 43 ಭೂಸ್ವಾಪ್ರ 2010, ಬೆಂಗಳೂರು, ದಿನಾಂಕ : 19–05–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ ಬೆಳಗಾಂ ಜಿಲ್ಲೆ, ಹುಕ್ಕೇರಿ ತಾಲ್ಲೂಕಿನ ಕಮತೂರು ಸಣ್ಣ ನೀರಾವರಿ ಕೆರೆಯ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ಸಿವಿಲ್ ನ್ಯಾಯಾಲಯವು ಎಲ್.ಎ.ಸಿ. ಸಂಖ್ಯೆ: 71/01 ಮತ್ತು 82/01 ರಲ್ಲಿ ನೀಡಿರುವ ಆದೇಶದಂತೆ ಪರಿಹಾರ ಪಾವತಿಸಲು ರೂ. 19,16,384/–ಗಳ (ಹತ್ತೊಂಭತ್ತು ಲಕ್ಷದ ಹದಿನಾರು ಸಾವಿರದ ಮುನ್ನೂರ ಎಂಬತ್ತನಾಲ್ಕು ರೂಪಾಯಿಗಳು ಮಾತ್ರ) ಅನುದಾನವನ್ನು ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಬಿಡುಗಡೆ ಮಾಡಲು ಅನುಮೋದನೆ ನೀಡಿದೆ.

1. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತಃಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸಿತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.
2. ಹೆಚ್ಚುವರಿ ಪರಿಹಾರಧನದ ಪಾವತಿಗೆ ಮೊದಲು ಜಮೀನಿನ ಹಕ್ಕುದಾರಿಕೆ ಬಗ್ಗೆ ಖಚಿತಪಡಿಸಕೊಂಡು ಪಾವತಿಸತಕ್ಕದ್ದು.
3. ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಸಂಬಂಧಿಸಿದ ಸಹಾಯಕ ಕಾರ್ಯಪಾಲಕ ಇಂಜಿನಿಯರ್‌ರವರು ವರ್ಗಾವಣೆ ಬಗ್ಗೆ ಕೂಡಲೇ ಕ್ರಮ ಕೈಗೊಳ್ಳತಕ್ಕದ್ದು.

ಈ ವೆಚ್ಚವನ್ನು 2011–12ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ "4702–00–800–1–00–132–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ ಬಂಡವಾಳ ವೆಚ್ಚಗಳು" ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ರೂ. 19,16,384–00 ಗಳನ್ನು ಹಂಚಿಕೆ ಮಾಡಿ ಬಿಡುಗಡೆ ಮಾಡಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2010, ದಿನಾಂಕ 20–10–10ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರ ಪ್ರತ್ಯಾಯೋಜನೆಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಗೋಪಾಲ್**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 1387 ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಬೆಳಗಾಂ ಜಿಲ್ಲೆ, ರಾಮದುರ್ಗ ತಾಲ್ಲೂಕಿನ ಗೊಡಚಿ ಗ್ರಾಮದ ಹದ್ದಿಯಲ್ಲಿ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಂಡ ಜಮೀನುಗಳಿಗೆ ಬೆಳೆ ನಷ್ಟ ಪರಿಹಾರ ನೀಡುವ ಬಗ್ಗೆ.

**ಓದಲಾಗಿದೆ :**

1. ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ಉತ್ತರ) ವಲಯ, ಬಿಜಾಪುರ ಇವರ ಪತ್ರ ಸಂಖ್ಯೆ: ಮುಇಂ/ಸನೀ(ಉ)ವ/ಬಿಜಾ/ಭೂಸ್ವಾಪ್ರ/2010–11/5169. ದಿನಾಂಕ 14–09–2010.
2. ಉಪ ವಿಭಾಗಾಧಿಕಾರಿಗಳು, ಬೈಲಹೊಂಗಲ ಇವರ ಆದೇಶ ಸಂಖ್ಯೆ: ಭೂಸ್ವಾ.ವಿವಹಿ.ರಾ 85/99–2000, ದಿನಾಂಕ 07–07–2010.

**ಪ್ರಸ್ತಾವನೆ :**

ಬೆಳಗಾಂ ಜಿಲ್ಲೆ, ರಾಮದುರ್ಗ ತಾಲ್ಲೂಕಿನ ಗೊಡಚಿ ಕೆರೆಯ ಮುಳುಗಡೆ ಪ್ರದೇಶದಲ್ಲಿ ಬರುವ ಗೊಡಚಿ ಗ್ರಾಮದ ಸರ್ವೆ ನಂಬರ್: 68/3ರ 3–33 ಎಕರೆ ಖಾಸಗಿ ಜಮೀನನ್ನು ಸ್ವಾಧೀನಪಡಿಸಿಕೊಂಡಿದ್ದು, ಭೂಸ್ವಾಧೀನ ಕಾಯ್ದೆಯ ಕಲಂ 4(1)ರ ಅಧಿಸೂಚನೆಯನ್ನು ದಿನಾಂಕ 05–07–01ರಂದು ಮತ್ತು ಪರಿಹಾರ ಧನದ ಐತೀರ್ಪನ್ನು ದಿನಾಂಕ 24–09–03ರಂದು ಹೊರಡಿಲಾಗಿದೆ. ಐತೀರ್ಪಿನಂತೆ ಪರಿಹಾರ ಪಡೆದ ಭೂಮಾಲೀಕರು ಭೂಸ್ವಾಧೀನ ಕಾಯ್ದೆ ಕಲಂ 18(1)ರಡಿ ಹೆಚ್ಚಿನ ಪರಿಹಾರಕ್ಕಾಗಿ ಸಿವಿಲ್ ನ್ಯಾಯಾಲಯ (ಹಿರಿಯ ವಿಭಾಗ) ಸವದತ್ತಿ ಇಲ್ಲಿ ಸಲ್ಲಿಸಿದ ಎಲ್.ಎ.ಸಿ. ಸಂಖ್ಯೆ: 1/01 ಮತ್ತು 2/04ರಲ್ಲಿ ನ್ಯಾಯಾಲಯವು ಹೆಚ್ಚಿನ ಪರಿಹಾರ ನಿಗದಿಪಡಿಸಿದೆ. ಈ ತೀರ್ಪಿನಂತೆ ಕಬ್ಜೆ ದಿನಾಂಕದಿಂದ 4(1)ರ ಅಧಿಸೂಚನೆ ದಿನಾಂಕದವರೆಗೆ ಬೆಲೆ ಹಾಕಿ ಪರಿಹಾರ ಮೊತ್ತ ರೂ. 1,28,362.00 ಮತ್ತು ರೂ. 3,62,624.00 ಒಟ್ಟು ರೂ. 4,90,986–00 ಗಳನ್ನು ಪಾವತಿಸಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಮೇಲೆ ಕ್ರಮಾಂಕ (1)ರಲ್ಲಿ ಓದಲಾದ ದಿನಾಂಕ 14–09–2010ರ ಪತ್ರದಲ್ಲಿ ಕೋರಿದ್ದಾರೆ.

ಎಲ್.ಎ.ಸಿ. ಪ್ರಕರಣಗಳಲ್ಲಿ ನ್ಯಾಯಾಲಯಕ್ಕೆ ದಾಖಲೆಗಳನ್ನು ಸಲ್ಲಿಸುವ ಸಂದರ್ಭದಲ್ಲಿ ಸ್ವಾಧೀನಕ್ಕೊಳಪಟ್ಟ ಜಮೀನುಗಳನ್ನು 1984ನೇ ಸಾಲಿನಲ್ಲಿ ಕಬ್ಜೆ ಪಡೆದಿರುವುದಾಗಿ ಸಹಾಯಕ ಕಾರ್ಯಪಾಲಕ ಅಭಿಯಂತರರು, ಸಣ್ಣ ನೀರಾವರಿ ಉಪ ವಿಭಾಗ ಗೋಕಾಕ್ ಇವರು ನ್ಯಾಯಾಲಯಕ್ಕೆ ಮಾಹಿತಿ ಸಲ್ಲಿಸಿದ್ದರು. ಇದನ್ನು ಆಧರಿಸಿ ಜಮೀನಿನ ಕಬ್ಜೆ ದಿನಾಂಕದಿಂದ 4(1)ರ ಅಧಿಸೂಚನೆ ದಿನಾಂಕದವರೆಗೆ ಬೆಳೆನಷ್ಟ ಪರಿಹಾರ ಪಾವತಿಸಲು ಭೂಮಾಲೀಕರು ಸಲ್ಲಿಸಿದ್ದ ಅರ್ಜಿಯನ್ನು ಪರಿಶೀಲಿಸಿ, ಉಪ ವಿಭಾಗಾಧಿಕಾರಿ, ಬೈಲಹೊಂಗಲ ಇವರು ರೂ. 4,90,986–00ಗಳ ನಷ್ಟ ಪರಿಹಾರಕ್ಕೆ ಮೇಲೆ (2)ರಲ್ಲಿ ಓದಲಾದ ದಿನಾಂಕ 07–07–2010ರಲ್ಲಿ ಆದೇಶ ಹೊರಡಿಸಿದ್ದಾರೆ. ಈ ಆದೇಶದಂತೆ ಭೂಮಾಲೀಕರಿಗೆ ಬೆಳೆ ನಷ್ಟ ಪರಿಹಾರ

ಪಾವತಿಸಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಹಣ ಬಿಡುಗಡೆ ಮಾಡುವಂತೆ ಮೇಲೆ (2)ರಲ್ಲಿ ಓದಲಾದ ದಿನಾಂಕ 14-09-10ರ ಪತ್ರದಲ್ಲಿ ಕೋರಿದ್ದಾರೆ.

ಮೇಲ್ಕಂಡ ಎಲ್ಲಾ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರವು ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸನೀಇ 135 ಭೂಸ್ವಾಪ್ರ 2010, ಬೆಂಗಳೂರು, ದಿನಾಂಕ : 19-05-2011**

ಬೆಳಗಾಂ ಜಿಲ್ಲೆ, ರಾಮದುರ್ಗ ತಾಲ್ಲೂಕಿನ ಗೊಡಚಿ ಗ್ರಾಮದ ಹದ್ದಿಯಲ್ಲಿ ನಿರ್ಮಿಸಲಾದ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕೆ ಸ್ವಾಧೀನಪಡಿಸಿಕೊಂಡ ನಾಗನೂರು ಗ್ರಾಮದ ಸ.ನಂ. 68/3ರ. 3-33 ಎಕರೆ ಜಮೀನಿಗೆ ಉಪವಿಭಾಗಾಧಿಕಾರಿ, ಬೈಲಹೊಂಗಲ ಇವರು ರಚಿಸಿರುವ ಐತೀರ್ಪಿನಂತೆ ಕಬ್ಜೆ ದಿನಾಂಕದಿಂದ 4(1)ರ ಅಧಿಸೂಚನೆ ದಿನಾಂಕದವರೆಗೆ ಬೆಳೆನಷ್ಟ ಪರಿಹಾರ ಪಾವತಿಸಲು ಐತೀರ್ಪಿನಂತೆ ರೂ. 4,90,986-00 ಗಳನ್ನು (ನಾಲ್ಕು ಲಕ್ಷದ ತೊಂಭತ್ತು ಸಾವಿರದ ಒಂಭೈನೂರ ಎಂಭತ್ತಾರು ರೂ.ಗಳು ಮಾತ್ರ) ಕೆಳಕಂಡ ಷರತ್ತುಗಳಿಗೊಳಪಟ್ಟು ನೀಡಲು ಅನುಮೋದನೆ ನೀಡಿದೆ.

1. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತಃಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.
2. ಹೆಚ್ಚುವರಿ ಪರಿಹಾರಧನದ ಪಾವತಿಗೆ ಮೊದಲು ಜಮೀನಿನ ಹಕ್ಕುದಾರಿಕೆ ಬಗ್ಗೆ ಖಚಿತಪಡಿಸಿಕೊಂಡು ಪಾವತಿಸತಕ್ಕದ್ದು.
3. ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಸಂಬಂಧಿಸಿದ ಸಹಾಯಕ ಕಾರ್ಯಪಾಲಕ ಇಂಜಿನಿಯರ್‌ರವರು ವರ್ಗಾವಣೆ ಬಗ್ಗೆ ಕೂಡಲೇ ಕ್ರಮ ಕೈಗೊಳ್ಳತಕ್ಕದ್ದು.

ಈ ವೆಚ್ಚವನ್ನು 2011-12ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ "4702-0-800-1-00 ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು-ಇತ್ಯರ್ಥ 132 ಬಂಡವಾಳ ವೆಚ್ಚಗಳು" ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ರೂ. 4,90,986-00 ಗಳನ್ನು ಹಂಚಿಕೆ ಮಾಡಿ ಬಿಡುಗಡೆ ಮಾಡಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2010, ದಿನಾಂಕ 20-10-10ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಗೋಪಾಲ್**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 1388 ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಗುಲ್ಬರ್ಗಾ ಜಿಲ್ಲೆ ಆಳಂದ ತಾಲ್ಲೂಕು ತಡಕಲ್ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಂಡ ಜಮೀನುಗಳಿಗೆ ನ್ಯಾಯಾಲಯದ ಆದೇಶಾನುಸಾರ ಹೆಚ್ಚುವರಿ ಪರಿಹಾರ ಪಾವತಿಸುವ ಬಗ್ಗೆ.

**ಓದಲಾಗಿದೆ :** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ಉತ್ತರ) ವಲಯ, ಬಿಜಾಪುರ ಇವರ ಪತ್ರ ಸಂಖ್ಯೆ: ಮುಇಂ/ಸನೀ(ಉ)ವ/ಬಿಜಾ/ಭೂಸ್ವಾಪ್ರ/2010-11/4324. ದಿನಾಂಕ 28-07-10.

**ಪ್ರಸ್ತಾವನೆ :**

ಗುಲ್ಬರ್ಗಾ ಜಿಲ್ಲೆ, ಆಳಂದ ತಾಲ್ಲೂಕು ತಡಕಲ್ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಂಡ ತಡಕಲ್ ಗ್ರಾಮದ ಜಮೀನುಗಳಿಗೆ ಆಳಂದ ಸಿವಿಲ್ (ಹಿರಿಯ ಶ್ರೇಣಿ) ನ್ಯಾಯಾಲಯವು ನೀಡಿರುವ ತೀರ್ಪಿನನುಸಾರ ಹೆಚ್ಚುವರಿ ಪರಿಹಾರ ಪಾವತಿಸಲು ರೂ. 1,79,408/-ಗಳ ಅನುದಾನ ಬಿಡುಗಡೆ ಮಾಡುವಂತೆ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ಉತ್ತರ) ವಲಯ, ಬಿಜಾಪುರ ಇವರು ಮೇಲೆ ಓದಲಾದ ದಿನಾಂಕ 28-07-2010ರ ಪತ್ರದಲ್ಲಿ ಕೋರಿರುತ್ತಾರೆ.

- ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರಡಿ ಅಧಿಸೂಚನೆ ದಿನಾಂಕ 03-07-2003 ರಂದು ಹೊರಡಿಸಿದೆ.
- ಭೂಸ್ವಾಧೀನಾಧಿಕಾರಿಗಳು ಐತೀರ್ಪು ಹೊರಡಿಸಿದ ದಿನಾಂಕ 25-07-2004

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳ ಭೂಮಾಲೀಕರು ಐತೀರ್ಪಿನಂತೆ ಹಣ ಪಡೆದು ಇನ್ನೂ ಹೆಚ್ಚಿನ ಪರಿಹಾರ ನೀಡುವಂತೆ ಭೂಸ್ವಾಧೀನ ಕಾಯ್ದೆ ಕಲಂ 18(1)ರಡಿ ಸಿವಿಲ್ ನ್ಯಾಯಾಲಯ (ಹಿರಿಯ ಶ್ರೇಣಿ), ಆಳಂದ ಇಲ್ಲಿ ದಾಖಲಿಸಿದ್ದ ಎಲ್.ಎ.ಸಿ. ಪ್ರಕರಣಗಳಲ್ಲಿ ನ್ಯಾಯಾಲಯವು ಪ್ರತಿ ಎಕರೆಗೆ ರೂ. 51,200/-ಗಳಿಗೆ ಹೆಚ್ಚಿಸಿದೆ.

ಪಾವತಿಸಬೇಕಾದ ಪರಿಹಾರ ಮೊತ್ತದ ವಿವರ ಕೆಳಕಂಡಂತಿದೆ.

| ಕ್ರ.ಸಂ. | ಎಲ್.ಎ.ಸಿ. ಸಂಖ್ಯೆ | ತಡಕಲ್ ಗ್ರಾಮದ ಸ.ನಂ. | ವಿಸ್ತೀರ್ಣ ಎ-ಗುಂ | ಪರಿಹಾರ ಮೊತ್ತ (ರೂ.ಗಳಲ್ಲಿ) |
|---|---|---|---|---|
| 1 | 19/06 | 812/D | 0-09 | 9679 |
| 2 | 20/06 | 812/ DI | 0-27 | 28037 |
| 3 | 21/06 | 812/ A2 | 0-06 | 6619 |
| 4 | 22/06 | 815/3 | 0-10 | 10698 |
| 5 | 29/06 | 812/3 | 1-12 | 53535 |
| 6 | 30/06 | 812/C | 1-00 | 41296 |
| | | | ಒಟ್ಟು | 149864 |

ಈ ಆದೇಶದ ವಿರುದ್ಧ ಮೇಲ್ಮನವಿ ಸಲ್ಲಿಸುವ ಅಗತ್ಯವಿಲ್ಲವೆಂದು ಕಾನೂನು ಇಲಾಖೆಯು ಪತ್ರ ಸಂಖ್ಯೆ: ಲಾ 819 ಎಲ್‌ಎಸ್‌ಪಿ 2007, ಲಾ 220 ಎಲ್‌ಎಸ್‌ಪಿ 2007, ಲಾ 825 ಎಲ್‌ಎಸ್‌ಪಿ 2007, ಲಾ 824 ಎಲ್‌ಎಸ್‌ಪಿ 2007, ದಿನಾಂಕ 15–06–07ರ ಪತ್ರಗಳಲ್ಲಿ ಅಭಿಪ್ರಾಯ ನೀಡಿದೆ.

ಮೇಲ್ಕಂಡ ಎಲ್ಲಾ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸನೀಇ 112 ಭೂಸ್ವಾಪ್ರ 2010, ಬೆಂಗಳೂರು, ದಿನಾಂಕ 19–05–2011**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳಿಂದ ಗುಲ್ಬರ್ಗಾ ಜಿಲ್ಲೆ, ಆಳಂದ ತಾಲ್ಲೂಕು ತಡಕಲ್ ಸಣ್ಣ ನೀರಾವರಿ ಕೆರೆಯ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಂಡ ತಡಕಲ್ ಗ್ರಾಮಕ್ಕೆ ಸೇರಿದ ವಿವಿಧ ಸರ್ವೆ ನಂಬರ್‌ಗಳ ಜಮೀನುಗಳಿಗೆ ಸಿವಿಲ್ ನ್ಯಾಯಾಲಯವು ಎಲ್.ಎ.ಸಿ. ಪ್ರಕರಣಗಳಲ್ಲಿ ನೀಡಿದ ತೀರ್ಪಿನಂತೆ ರೂ. 1,49,864–00 (ಒಂದು ಲಕ್ಷದ ನಲವತ್ತೊಂಭತ್ತು ಸಾವಿರದ ಎಂಟು ನೂರ ಅರವತ್ನಾಲ್ಕು ರೂಪಾಯಿಗಳು ಮಾತ್ರ) ಗಳ ಪರಿಹಾರ ಪಾವತಿಸಲು ಈ ಕೆಳಕಂಡ ಷರತ್ತಿಗೊಳಪಟ್ಟು ಅನುಮೋದನೆ ನೀಡಿದೆ.

1. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತಃಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.
2. ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಕೂಡಲೇ ಸಂಬಂಧಿಸಿದ ಸಣ್ಣ ನೀರಾವರಿ ಅಧಿಕಾರಿಗಳು ವರ್ಗಾವಣೆ ಬಗ್ಗೆ ಕ್ರಮ ಕೈಗೊಳ್ಳತಕ್ಕದ್ದು.

ಈ ವೆಚ್ಚವನ್ನು 2011–12ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ "4702–00–800–1–00–132–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ ಬಂಡವಾಳ ವೆಚ್ಚಗಳು" ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ರೂ. 1,49,864–00 ಗಳನ್ನು ಹಂಚಿಕೆ ಮಾಡಿ ಬಿಡುಗಡೆ ಮಾಡಿದೆ.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2010, ದಿನಾಂಕ 20–10–2010ರಲ್ಲಿ ಸರ್ಕಾರದ ಕಾರ್ಯದರ್ಶಿಯವರಿಗೆ ನೀಡಿರುವ ಅಧಿಕಾರ ಪ್ರತ್ಯಾಯೋಜನೆ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಗೋಪಾಲ್**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 1389 ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಚಿತ್ರದುರ್ಗ ತಾಲ್ಲೂಕು ಕೊಳಹಾಳ್ ಸಣ್ಣ ನೀರಾವರಿ ಕೆರೆ ನಿರ್ಮಾಣ ಕಾಮಗಾರಿಗಾಗಿ ಸ್ವಾಧೀನಪಡಿಸಿಕೊಂಡ ಜಮೀನುಗಳಿಗೆ ನ್ಯಾಯಾಲಯದ ಆದೇಶಾನುಸಾರ ಹೆಚ್ಚುವರಿ ಪರಿಹಾರ ಪಾವತಿಸುವ ಬಗ್ಗೆ.

**ಓದಲಾಗಿದೆ :** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ದಕ್ಷಿಣ) ವಲಯ, ಬೆಂಗಳೂರು ಇವರ ಪತ್ರ ಸಂಖ್ಯೆ: ಮುಸದ/ಲೆಶಾಖೆ/ಲೆಸ–1/3/ಭೂಸ್ವಾಧೀನ/2010–11/1623, ದಿನಾಂಕ 20–07–2010.

**ಪ್ರಸ್ತಾವನೆ :**

ಚಿತ್ರದುರ್ಗ ತಾಲ್ಲೂಕು ಕೊಳಹಾಳ್ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಂಡ ಜಟ್ಲಹಳ್ಳೀ ಗ್ರಾಮದ ಜಮೀನುಗಳಿಗೆ ಸಿವಿಲ್ ನ್ಯಾಯಾಲಯ (ಹಿರಿಯ ಶ್ರೇಣಿ) ಚಿತ್ರದುರ್ಗ ನೀಡಿರುವ ತೀರ್ಪಿನನುಸಾರ ಹೆಚ್ಚುವರಿ ಪರಿಹಾರ ಪಾವತಿಸಲು ರೂ. 8,87,638 ಲಕ್ಷಗಳ ಅನುದಾನ ಬಿಡುಗಡೆ ಮಾಡಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ದಕ್ಷಿಣ) ವಲಯ, ಬೆಂಗಳೂರು ಇವರು ಮೇಲೆ ಓದಲಾದ ದಿನಾಂಕ 20–07–2010ರ ಪತ್ರದಲ್ಲಿ ಕೋರಿರುತ್ತಾರೆ. ಭೂಸ್ವಾಧೀನ ಪ್ರಕ್ರಿಯೆಯ ವಿವರಗಳು ಈ ಕೆಳಕಂಡಂತಿವೆ.

- ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರಡಿ ಅಧಿಸೂಚನ ಹೊರಡಿಸಿದ ದಿನಾಂಕ 31–10–1991
- ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 11(ಎ)ರಡಿ ಭೂಸ್ವಾಧೀನಾಧಿಕಾರಿಗಳು ಪರಿಹಾರ ಧನದ ಐತೀರ್ಪು ರಚಿಸಿದ ದಿನಾಂಕ 31–12–1993.

ಭೂಸ್ವಾಧೀನಕ್ಕೊಳಪಟ್ಟ ಜಟ್ಲಹಳ್ಳಿ ಗ್ರಾಮದ ಜಮೀನುಗಳ ಭೂಮಾಲೀಕರು ಭೂಸ್ವಾಧೀನಾಧಿಕಾರಿಗಳು ರಚಿಸಿದ ಐತೀರ್ಪಿನಂತೆ ಪರಿಹಾರ ಪಡೆದು ಇನ್ನೂ ಹೆಚ್ಚಿನ ಪರಿಹಾರಕ್ಕಾಗಿ ಭೂಸ್ವಾಧೀನ ಕಾಯ್ದೆ 1894ರ ಕಲಂ 18(1)ರಡಿ ಸಿವಿಲ್ ನ್ಯಾಯಾಲಯ (ಹಿರಿಯ ಶ್ರೇಣಿ), ಚಿತ್ರದುರ್ಗ ಇಲ್ಲಿ ಎಲ್.ಎ.ಸಿ. ಪ್ರಕರಣಗಳನ್ನು ಸಲ್ಲಿಸಿದ್ದು, ನ್ಯಾಯಾಲಯವು ದಿನಾಂಕ 31–10–2003ರಂದು ನೀಡಿದ ಆದೇಶದಲ್ಲಿ ಹೆಚ್ಚಿನ ಪರಿಹಾರ ನಿಗದಿ ಮಾಡಿದೆ. ಸಿವಿಲ್ ನ್ಯಾಯಾಲಯದ ತೀರ್ಪಿನ ವಿರುದ್ಧ ಉಚ್ಛ ನ್ಯಾಯಾಲಯದಲ್ಲಿ ಸರ್ಕಾರ ಸಲ್ಲಿಸಿದ್ದ ಎಂ.ಎಫ್.ಎ. ಸಂಖ್ಯೆ: 6031/04 ಮತ್ತು 6033/04ನ್ನು ನ್ಯಾಯಾಲಯವು ದಿನಾಂಕ 23–02–2010 ರಂದು ವಜಾ ಮಾಡಿದೆ. ಉಚ್ಛ ನ್ಯಾಯಾಲಯದ ಆದೇಶದ ವಿರುದ್ಧ ಮೇಲ್ಮನವಿ ಸಲ್ಲಿಸುವ ಅಗತ್ಯವಿಲ್ಲವೆಂದು ಕಾನೂನು ಇಲಾಖೆಯು ಪತ್ರ ಸಂಖ್ಯೆ: ಲಾ 272 ಎಲ್‌ಎಸ್‌ಪಿ 2010, ದಿನಾಂಕ 13–04–2010 ರಂದು ಅಭಿಪ್ರಾಯ ನೀಡಿರುತ್ತದೆ.

ನ್ಯಾಯಾಲಯವು ಹೆಚ್ಚುವರಿ ಪರಿಹಾರಕ್ಕೆ ತೀರ್ಮ ತೀಡಿರುವ ವಿವರ ಈ ಕೆಳಕಂಡಂತಿದೆ.

(ರೂ.ಗಳಲ್ಲಿ)

| ಕ್ರ.ಸಂ. | ಎಲ್.ಎ.ಸಿ. ಸಂಖ್ಯೆ | ಎಂ.ಎಫ್.ಎ. ಸಂಖ್ಯೆ | ಜಟ್ಲಹಳ್ಳಿ ಗ್ರಾಮದ ಸರ್ವೆ ನಂ. | ವಿಸ್ತೀರ್ಣ ಎ–ಗುಂ | ಪರಿಹಾರ ಧನದ ಮೊತ್ತ |
|---|---|---|---|---|---|
| 1 | 139/95 | 6031/04 | 6/2 | 4–08 | 378361 |
| 2 | 5/96 | 6033/04 | 12/2ಪಿ | 3–25 | 431905 |
| | | | | ಒಟ್ಟು | 810266 |

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸನೀಇ 97 ಭೂಸ್ವಾಪ್ರ 2010, ಬೆಂಗಳೂರು, ದಿನಾಂಕ 19-05-2011**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳಿಂದ ಚಿತ್ರದುರ್ಗ ತಾಲ್ಲೂಕು ಕೊಳಹಾಳ್ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಂಡ ಪ್ರಸ್ತಾವನೆಯಲ್ಲಿ ವಿವರಿಸಿದ ಸರ್ವೆ ನಂಬರ್‌ಗಳ ಜಮೀನುಗಳಿಗೆ ಸಿವಿಲ್ ನ್ಯಾಯಾಲಯ ನೀಡಿದ ಆದೇಶದಂತೆ ಪರಿಹಾರ ಮೊತ್ತ ರೂ. 8,10,266-00 (ಎಂಟು ಲಕ್ಷದ ಹತ್ತು ಸಾವಿರದ ಇನ್ನೂರ ಅರವತ್ತಾರು ರೂಪಾಯಿಗಳು ಮಾತ್ರ) ಗಳನ್ನು ಪಾವತಿಸಲು ಸರ್ಕಾರವು ಈ ಕೆಳಕಂಡ ಷರತ್ತಿಗೊಳಪಟ್ಟು ಅನುಮೋದನೆ ನೀಡಿದೆ.

1) ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತಃಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.

2) ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಕೂಡಲೇ ಸಣ್ಣ ನೀರಾವರಿ ಅಧಿಕಾರಿಗಳು ವರ್ಗಾವಣೆ ಬಗ್ಗೆ ಕ್ರಮ ಕೈಗೊಳ್ಳತಕ್ಕದ್ದು.

ಈ ವೆಚ್ಚವನ್ನು 2011-12ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ "4702-0-800-1-00 ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು-ಇತ್ಯರ್ಥ 132 ಬಂಡವಾಳ ವೆಚ್ಚಗಳು" ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ರೂ. 8,10,266-00 ಗಳನ್ನು ಹಂಚಿಕೆ ಮಾಡಿ ಬಿಡುಗಡೆ ಮಾಡಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 01 ಟಿಎಫ್‌ಪಿ 2010, ದಿನಾಂಕ 20-10-2010ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಗೋಪಾಲ್**

ಸರ್ಕಾರದ ಅಧೀನ ಕಾರ್ಯದರ್ಶಿ

ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

ಪಿ.ಆರ್. 1390

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಚಿತ್ರದುರ್ಗ ಜಿಲ್ಲೆ, ಮೊಳಕಾಲ್ಮೂರು ತಾಲ್ಲೂಕು ರಂಗಯ್ಯನದುರ್ಗ ಜಲಾಶಯದ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ಸಿವಿಲ್ ನ್ಯಾಯಾಲಯದ ಆದೇಶದಂತೆ ಹೆಚ್ಚಿನ ಪರಿಹಾರ ಪಾವತಿಸುವ ಬಗ್ಗೆ.

**ಓದಲಾಗಿದೆ :** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ದಕ್ಷಿಣ) ವಲಯ, ಬೆಂಗಳೂರು ಇವರ ಪತ್ರ ಸಂಖ್ಯೆ: ಮುಸದ/ಲೆಶಾ/ಲೆಸ-1/ಭೂಸ್ವಾಧೀನ/10-11/1792, ದಿನಾಂಕ 07-08-2010.

**ಪ್ರಸ್ತಾವನೆ :**

ಚಿತ್ರದುರ್ಗ ಜಿಲ್ಲೆ, ಮೊಳಕಾಲ್ಮೂರು ತಾಲ್ಲೂಕು ರಂಗಯ್ಯನದುರ್ಗ ಜಲಾಶಯದ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಭಟ್ರಳ್ಳಿ ಗ್ರಾಮದ ಸರ್ವೆ ನಂಬರ್‌ಗಳ ಜಮೀನುಗಳಿಗೆ ಚಳ್ಳಕೆರೆ ಸಿವಿಲ್ ನ್ಯಾಯಾಲಯವು (ಹಿರಿಯ ವಿಭಾಗ) ಎಲ್.ಎ.ಸಿ. ಪ್ರಕರಣ ಸಂಖ್ಯೆ: 07/06ರಲ್ಲಿ ದಿನಾಂಕ 18-10-08 ರಂದು ನೀಡಿರುವ ಆದೇಶದಂತೆ ಹೆಚ್ಚುವರಿ ಪರಿಹಾರ ಮೊತ್ತ ರೂ. 1,30,855-00 ಗಳನ್ನು ಬಿಡುಗಡೆ ಮಾಡಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ಇವರು ಮೇಲೆ ಓದಲಾದ ದಿನಾಂಕ 07-08-10ರ ಪತ್ರದಲ್ಲಿ ಕೋರಿದ್ದಾರೆ.

ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರ ಅಧಿಸೂಚನೆ ದಿನಾಂಕ 17-05-01ರ ಪ್ರಕಾರ ಭೂಸ್ವಾಧೀನಕ್ಕೊಳಪಟ್ಟ ಭಟ್ರಳ್ಳಿ ಗ್ರಾಮದ ಸ.ನಂ. 15/1ಪಿ 1-21 ಎಕರೆ ಜಮೀನಿನ ಭೂಮಾಲೀಕರು ದಿನಾಂಕ 28-01-04 ರಂದು ರಚಿಸಿದ ಐತೀರ್ಪಿನಂತೆ ಹಣ ಪಡೆದು, ಇನ್ನೂ ಹೆಚ್ಚಿನ ಪರಿಹಾರಕ್ಕಾಗಿ ಚಳ್ಳಕೆರೆ ಸಿವಿಲ್ ನ್ಯಾಯಾಲಯ (ಹಿರಿಯ ವಿಭಾಗ) ದಲ್ಲಿ ಎಲ್.ಎ.ಸಿ. ಸಂಖ್ಯೆ: 07/06ನ್ನು ಸಲ್ಲಿಸಿದ್ದು, ನ್ಯಾಯಾಲಯವು ಜಮೀನಿನ ಭೂಮೌಲ್ಯವನ್ನು ಪ್ರತಿ ಎಕರೆಗೆ ರೂ. 37,200/-ಗಳಿಗೆ ಹೆಚ್ಚಿಸಿ ಆದೇಶಿಸಿದೆ. ನ್ಯಾಯಾಲಯದ ಆದೇಶದಂತೆ ಪಾವತಿಸಬೇಕಾದ ಮೊತ್ತದ ವಿವರ ಕೆಳಕಂಡಂತಿದೆ:

| ಕ್ರ.ಸಂ. | ಎಲ್.ಎ.ಸಿ. ಸಂಖ್ಯೆ | ಭಟ್ರಳ್ಳಿ ಗ್ರಾಮದ ಸ.ನಂ. | ವಿಸ್ತೀರ್ಣ ಎ-ಗುಂ | ಪರಿಹಾರ ಮೊತ್ತ (ರೂ.ಗಳಲ್ಲಿ) |
|---|---|---|---|---|
| 1 | 07/06 | 15/1P | 1-21 | 1,25,296-00 |
| | | | ಒಟ್ಟು | 1,25,296-00 |

ಈ ಆದೇಶದ ವಿರುದ್ಧ ಮೇಲ್ಮನವಿ ಸಲ್ಲಿಸಲು ಇದು ಅರ್ಹವಲ್ಲವೆಂದು ಕಂದಾಯ ಇಲಾಖೆ ಕಾನೂನು ಕೋಶವು ಪತ್ರ ಸಂಖ್ಯೆ: ಆರ್‌ಡಿ 558 ಎಲ್‌ಸಿಎ 2008, ದಿನಾಂಕ 06-02-10ರಲ್ಲಿ ಅಭಿಪ್ರಾಯ ನೀಡಿದೆ.

ಮೇಲ್ಕಂಡ ಎಲ್ಲಾ ಅಂಶಗಳನ್ನು ಪರಿಶೀಲಿಸಿ, ಸರ್ಕಾರವು ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸನೀಇ 122 ಭೂಸ್ವಾಪ್ರ 2010, ಬೆಂಗಳೂರು, ದಿನಾಂಕ 19-05-2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ ಚಿತ್ರದುರ್ಗ ಜಿಲ್ಲೆ, ಮೊಳಕಾಲ್ಮೂರು ತಾಲ್ಲೂಕು ರಂಗಯ್ಯನದುರ್ಗ ಜಲಾಶಯದ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಭಟ್ರಳ್ಳಿ ಜಮೀನುಗಳಿಗೆ ಸಿವಿಲ್ ನ್ಯಾಯಾಲಯವು ಎಲ್.ಎ.ಸಿ. ಸಂಖ್ಯೆ: 07/06ರಲ್ಲಿ ನೀಡಿರುವ ಆದೇಶದಂತೆ ಪರಿಹಾರ ರೂ. 1,25,296-00 ಗಳನ್ನು (ಒಂದು ಲಕ್ಷದ ಇಪ್ಪತ್ತೈದು ಸಾವಿರದ ಇನ್ನೂರ ತೊಂಭತ್ತಾರು ರೂ.ಗಳು ಮಾತ್ರ) ಈ ಕೆಳಕಂಡ ಷರತ್ತುಗಳಿಗೊಳಪಟ್ಟು ನೀಡಲು ಸರ್ಕಾರದ ಅನುಮೋದನೆ ನೀಡಿದೆ.

1) ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತಃಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.

2) ಹೆಚ್ಚುವರಿ ಪರಿಹಾರಧನದ ಪಾವತಿಗೆ ಮೊದಲು ಜಮೀನಿನ ಹಕ್ಕುದಾರಿಕೆ ಬಗ್ಗೆ ಖಚಿತಪಡಿಸಿಕೊಂಡು ಪಾವತಿಸತಕ್ಕದ್ದು;

3) ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಸಂಬಂಧಿಸಿದ ಸಹಾಯಕ ಕಾರ್ಯಪಾಲಕ ಇಂಜಿನಿಯರ್‌ರವರು ವರ್ಗಾವಣೆ ಬಗ್ಗೆ ಕೂಡಲೇ ಕ್ರಮ ಕೈಗೊಳ್ಳತಕ್ಕದ್ದು.

ಈ ವೆಚ್ಚವನ್ನು 2011–12ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ "4702–02–800–1–00–132–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ ಬಂಡವಾಳ ವೆಚ್ಚಗಳು" ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ರೂ. 1,25,296–00 ಗಳನ್ನು ಹಂಚಿಕೆ ಮಾಡಿ ಬಿಡುಗಡೆ ಮಾಡಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2010, ದಿನಾಂಕ 20–10–2010ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಗೋಪಾಲ್**
ಸರ್ಕಾರದ ಅಧೀನ ಕಾರ್ಯದರ್ಶಿ
ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

ಪಿ.ಆರ್. 1391

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಗುಲ್ಬರ್ಗಾ ಜಿಲ್ಲೆ, ಚಿಂಚೋಳಿ ತಾಲ್ಲೂಕು ಐನಾಪುರ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ಭೂಸ್ವಾಧೀನ ಕಾಯ್ದೆ ಕಲಂ 28(ಎ)ರ ಐತೀರ್ಪಿನಂತೆ ಹೆಚ್ಚಿನ ಪರಿಹಾರ ಪಾವತಿಸುವ ಬಗ್ಗೆ.

**ಓದಲಾಗಿದೆ :** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ಉತ್ತರ) ವಲಯ, ಬಿಜಾಪುರ ಇವರ ಪತ್ರ ಸಂಖ್ಯೆ: ಮುಇಂ/ಸನೀ/(ಉ)ವ/ಬಿಜಾ/ಭೂಸ್ವಾಪ್ರ/2010–11/4972, ದಿನಾಂಕ 31–08–2010.

**ಪ್ರಸ್ತಾವನೆ :**

ಗುಲ್ಬರ್ಗಾ ಜಿಲ್ಲೆ, ಚಿಂಚೋಳಿ ತಾಲ್ಲೂಕು ಐನಾಪುರ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಂಡ ಐನಾಪುರ ಗ್ರಾಮದ ವಿವಿಧ ಸರ್ವೆ ನಂಬರ್‌ಗಳ ಜಮೀನುಗಳಿಗೆ ಚಿಂಚೋಳಿ ಸಿವಿಲ್ ನ್ಯಾಯಾಲಯವು (ಹಿರಿಯ ವಿಭಾಗ) ಎಲ್.ಎ.ಸಿ. ಪ್ರಕರಣ ಸಂಖ್ಯೆ: 13/07ರಲ್ಲಿ ದಿನಾಂಕ 07–08–2009 ರಂದು ನೀಡಿರುವ ಆದೇಶವನ್ನು ಆಧರಿಸಿ ಸ್ವಾಧೀನಕ್ಕೊಳಪಟ್ಟ ಇತರೆ ಜಮೀನುಗಳಿಗೆ ವಿಶೇಷ ಭೂಸ್ವಾಧೀನಾಧಿಕಾರಿಗಳು, ಭೂಸ್ವಾಧೀನ ಕಾಯ್ದೆ ಕಲಂ 28(ಎ)ರಡಿ ರಚಿಸಿರುವ ಐತೀರ್ಪಿನಂತೆ ಮೊತ್ತ ರೂ. 9,05,670–00 ಗಳನ್ನು ಬಿಡುಗಡೆ ಮಾಡುವಂತೆ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ರವರು ಮೇಲೆ ಓದಲಾದ ದಿನಾಂಕ 07–06–2010ರ ಪತ್ರದಲ್ಲಿ ಕೋರಿದ್ದಾರೆ.

ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರ ಅಧಿಸೂಚನೆಯ್ನು ದಿನಾಂಕ 06–07–2000ರಂದು ಹೊರಡಿಸಿದೆ. ಭೂಸ್ವಾಧೀನಕ್ಕೆ ಒಳಪಟ್ಟ ಜಮೀನುಗಳಿಗೆ ಭೂಸ್ವಾಧೀನಾಧಿಕಾರಿಗಳು ದಿನಾಂಕ 20–11–2003ರಂದು ರಚಿಸಿರುವ ಐತೀರ್ಪಿನಲ್ಲಿ ಮೇಲ್ಕಂಡ ಜಮೀನಿನ ಮಾರುಕಟ್ಟೆ ಬೆಲೆಯನ್ನು ಪ್ರತಿ ಎಕರೆ ಖುಷ್ಕಿ ಜಮೀನಿಗೆ ರೂ. 16,900.00 ಮತ್ತು ಬಾಗಾಯ್ತು ಜಮೀನಿಗೆ ರೂ. 25,000.00ಗಳನ್ನು ನಿಗದಿಪಡಿಸಿರುತ್ತಾರೆ. ಈ ಐತೀರ್ಪಿನಂತೆ ಪರಿಹಾರ ಪಡೆದ ಭೂಮಾಲೀಕರು ಹೆಚ್ಚಿನ ಪರಿಹಾರ ಕೋರಿ ಸಿವಿಲ್ ನ್ಯಾಯಾಲಯ (ಹಿರಿಯ ಶ್ರೇಣಿ) ಚಿಂಚೋಳಿ ಇಲ್ಲಿ ಸಲ್ಲಿಸಿದ ಎಲ್.ಎ.ಸಿ. ಸಂಖೆ: 31/07ರಲ್ಲಿ ದಿನಾಂಕ 07–08–2009 ರಂದು ನೀಡಿದ ಆದೇಶದಲ್ಲಿ ಈ ಜಮೀನುಗಳ ಮಾರುಕಟ್ಟೆ ಬೆಲೆಯನ್ನು ಪ್ರತಿ ಎಕರೆಗೆ ರೂ. 38,000.00 ಗಳನ್ನು ನಿಗದಿಪಡಿಸಿರುತ್ತಾರೆ.

ಸಿವಿಲ್ ನ್ಯಾಯಾಲಯದ ತೀರ್ಪನ್ನು ಆಧರಿಸಿ, ಸರ್ವೆ ನಂ. 31/ಸಿ ಜಮೀನಿನ ಭೂಮಾಲೀಕರು ಹೆಚ್ಚಿನ ಪರಿಹಾರ ಕೋರಿ ಸಲ್ಲಿಸಿದ ಮನವಿಯನ್ನು ಪರಿಶೀಲಿಸಿ ವಿಶೇಷ ಭೂಸ್ವಾಧೀನಾಧಿಕಾರಿಗಳು, ಸಣ್ಣ ಮತ್ತು ಮಧ್ಯಮ ನೀರಾವರಿ ಯೋಜನೆಗಳು, ಗುಲ್ಬರ್ಗಾ ಇವರು ಭೂಸ್ವಾಧೀನ ಕಾಯ್ದೆ ಕಲಂ 28(ಎ)ರಡಿ ದಿನಾಂಕ 25–02–2010 ರಂದು ಐತೀರ್ಪಿನಲ್ಲಿ ರೂ. 9,05,679.00 ಗಳ ಪರಿಹಾರ ನಿಗದಿಪಡಿಸಿರುತ್ತಾರೆ.

ಮುಖ್ಯ ಇಂಜಿನಿಯರ್‌ರವರ ಪ್ರಸ್ತಾವವನ್ನು ಪರಿಶೀಲಿಸಿ ಸರ್ಕಾರವು ಕೆಳಕಂಡಂತೆ ಆದೇಶಿಸಿದೆ

**ಸರ್ಕಾರದ ಆದೇಶ ಸಂಖ್ಯೆ : ಸನೀಇ 138 ಭೂಸ್ವಾಪ್ರ 2010, ಬೆಂಗಳೂರು, ದಿನಾಂಕ : 19–05–2011**

ಗುಲ್ಬರ್ಗಾ ಜಿಲ್ಲೆ ಚಿಂಚೋಳಿ ತಾಲ್ಲೂಕು ಐನಾಪುರ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಐನಾಪುರ ಗ್ರಾಮದ ಸರ್ವೆ ನಂಬರ್ 31/ಸಿ ನ ಜಮೀನುಗಳಿಗೆ ವಿಶೇಷ ಭೂಸ್ವಾಧೀನಾಧಿಕಾರಿಗಳು, ಸಣ್ಣ ಮತ್ತು ಮಧ್ಯಮ ನೀರಾವರಿ ಯೋಜನೆಗಳು, ಗುಲ್ಬರ್ಗಾ ಭೂಸ್ವಾಧೀನ ಕಾಯ್ದೆ ಕಲಂ 28(ಎ)ರಡಿ ರಚಿಸಿರುವ ಐತೀರ್ಪಿನಂತೆ ರೂ. 9,05,679–00 ಗಳನ್ನು ಒಟ್ಟು (ಒಂಭತ್ತು ಲಕ್ಷದ ಐದು ಸಾವಿರದ ಆರುನೂರು ಎಪ್ಪತ್ತೊಂಬತ್ತು ರೂಪಾಯಿಗಳು ಮಾತ್ರ) ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಪರಿಹಾರ ಪಾವತಿಸಲು ಅನುಮೋದನೆ ನೀಡಿದೆ.

1) ಹಣ ಪಾವತಿಗೆ ಮೊದಲು ಲೆಕ್ಕಾಚಾರ ತಃಖ್ತೆಯನ್ನು ಮತ್ತೊಮ್ಮೆ ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಹೆಚ್ಚಿನ ಮೊತ್ತ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.
2) ಹೆಚ್ಚುವರಿ ಪರಿಹಾರ ಪಾವತಿಗೆ ಮೊದಲು ಜಮೀನಿನ ಹಕ್ಕುದಾರಿಕೆ ಬಗ್ಗೆ ಮತ್ತೊಮ್ಮೆ ಖಚಿತಪಡಿಸಿಕೊಂಡು ಪಾವತಿಸತಕ್ಕದ್ದು.
3) ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಕೂಡಲೇ ಸಂಬಂಧಿಸಿದ ಸಹಾಯಕ ಕಾರ್ಯಪಾಲಕ ಇಂಜಿನಿಯರ್‌ರವರು ವರ್ಗಾವಣೆ ಬಗ್ಗೆ ಕೂಡಲೇ ಕ್ರಮ ಕೈಗೊಳ್ಳತಕ್ಕದ್ದು.

ಈ ವೆಚ್ಚವನ್ನು 2011–12ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ "4702–0–800–1–00 ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132–ಬಂಡವಾಳ ವೆಚ್ಚಗಳು" ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ರೂ. 9,05,679–00ಗಳನ್ನು ಹಂಚಿಕೆ ಮಾಡಿ ಬಿಡುಗಡೆ ಮಾಡಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 01 ಟಿಎಫ್‌ಪಿ 2010, ದಿನಾಂಕ 20–10–2010ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಗೋಪಾಲ್**
ಸರ್ಕಾರದ ಅಧೀನ ಕಾರ್ಯದರ್ಶಿ
ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

ಪಿ.ಆರ್. 1392

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಗುಲ್ಬರ್ಗಾ ಜಿಲ್ಲೆ, ಚಿಂಚೋಳಿ ತಾಲ್ಲೂಕು ಸಾಲೇಬೀರನಹಳ್ಳಿ ಸಣ್ಣ ನೀರಾವರಿ ಕೆರೆ ನಿರ್ಮಾಣ ಕಾಮಗಾರಿಗಾಗಿ ಸ್ವಾಧೀನಪಡಿಸಿಕೊಂಡ ಜಮೀನುಗಳಿಗೆ ನ್ಯಾಯಾಲಯದ ಅದೇಶದಂತೆ ಹೆಚ್ಚುವರಿ ಪರಿಹಾರ ಪಾವತಿಸುವ ಬಗ್ಗೆ.

**ಓದಲಾಗಿದೆ :** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ಉತ್ತರ) ವಲಯ, ಬಿಜಾಪುರ ಇವರ ಪತ್ರ ಸಂಖ್ಯೆ: ಮುಇಂ/ಸನೀ/(ಉ)ವ/ಬಿಜಾ/ಭೂಸ್ವಾಪ್ರ/2009-10/5711, ದಿನಾಂಕ 25-09-2009.

**ಪ್ರಸ್ತಾವನೆ :**

ಗುಲ್ಬರ್ಗಾ ಜಿಲ್ಲೆ, ಚಿಂಚೋಳಿ ತಾಲ್ಲೂಕು ಸಾಲೇಬೀರನಹಳ್ಳಿ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಂಡ ಸಾಲೇಬೀರನಹಳ್ಳಿ ಗ್ರಾಮದ ಜಮೀನುಗಳಿಗೆ ನ್ಯಾಯಾಲಯ ನೀಡಿರುವ ತೀರ್ಪಿನನುಸಾರ ಹೆಚ್ಚುವರಿ ಪರಿಹಾರ ಧನ ಪಾವತಿಸಲು ರೂ. 1,31,963.00 ಗಳನ್ನು ಬಿಡುಗಡೆ ಮಾಡುವಂತೆ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ಉತ್ರರ) ವಲಯ, ಬಿಜಾಪುರ ಇವರು ಮೇಲೆ ಓದಲಾದ ದಿನಾಂಕ 25-09-2009ರ ಪತ್ರದಲ್ಲಿ ಕೋರಿರುತ್ತಾರೆ.

ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರಡಿ ಅಧಿಸೂಚನೆ ಹೊರಡಿಸಿದ ದಿನಾಂಕ 22-09-88 ರಂದು ಹೊರಡಿಸಿದೆ. ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳಿಗೆ ಭೂಸ್ವಾಧೀನಾಧಿಕಾರಿ, ಗುಲ್ಬರ್ಗಾ ಇವರು ದಿನಾಂಕ 09-05-91ರಂದು ರಚಿಸಿರುವ ಐತೀರ್ಪಿನಂತೆ ಹಣ ಪಡೆದ ಭೂಮಾಲೀಕರು ಇನ್ನೂ ಹೆಚ್ಚಿನ ಪರಿಹಾರಕ್ಕಾಗಿ ಭೂಸ್ವಾಧೀನ ಕಾಯ್ದೆ ಕಲಂ 18(1)ರಡಿ ಗುಲ್ಬರ್ಗಾ ಸಿವಿಲ್ ನ್ಯಾಯಾಲಯ (ಹಿರಿಯ ವಿಭಾಗ)ದಲ್ಲಿ ಎಲ್.ಎ.ಸಿ. ಪ್ರಕರಣಗಳನ್ನು ದಾಖಲಿಸಿದ್ದು, ಸಿವಿಲ್ ನ್ಯಾಯಾಲಯ ಪ್ರತಿ ಎಕರೆಗೆ ರೂ. 15,800/-ಗಳ ಬೆಲೆಯನ್ನು ನಿಗದಿಪಡಿಸಿ, ಈ ಮೊತ್ತದ ಮೇಲೆ ಶಾಸನಬದ್ಧ ಇತರೆ ಸವಲತ್ತುಗಳೊಂದಿಗೆ ಪಾವತಿಸಲು ಆದೇಶಿಸಿದೆ.

ಸಿವಿಲ್ ನ್ಯಾಯಾಲಯವು ಹೆಚ್ಚುವರಿ ಪರಿಹಾರ ಧನಕ್ಕೆ ತೀರ್ಪು ನೀಡಿರುವ ಪ್ರಕರಣದ ವಿವರ ಈ ಕೆಳಕಂಡಂತಿದೆ.

(ರೂ.ಗಳಲ್ಲಿ)

| ಕ್ರ.ಸಂ. | ಎಲ್.ಎ.ಸಿ. ಸಂಖ್ಯೆ | ಸಾಲೇಬೀರನಹಳ್ಳಿ ಗ್ರಾಮದ ಸರ್ವೆ ನಂ. | ವಿಸ್ತೀರ್ಣ ಎ-ಗುಂ | ಪರಿಹಾರ ಧನದ ಮೊತ್ತ |
|---|---|---|---|---|
| 1 | 33/94 | 20/2 | 1-20 | 1,31,963-00 |

ಸಿವಿಲ್ ನ್ಯಾಯಾಲಯದ ತೀರ್ಪಿನ ವಿರುದ್ಧ ಮೇಲ್ಮನವಿ ಸಲ್ಲಿಸುವ ಅಗತ್ಯವಿಲ್ಲವೆಂದು ಕಂದಾಯ ಇಲಾಖೆಯು ಅಭಿಪ್ರಾಯ ನೀಡಿರುತ್ತದೆ. ವಿಷಯವನ್ನು ಪರಿಶೀಲಿಸಿ ಸರ್ಕಾರವು ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸನೀಇ 149 ಭೂಸ್ವಾಪ್ರ 2009, ಬೆಂಗಳೂರು, ದಿನಾಂಕ 21-05-2011**

ಗುಲ್ಬರ್ಗಾ ಜಿಲ್ಲೆ ಚಿಂಚೋಳಿ ತಾಲ್ಲೂಕು, ಸಾಲೇಬೀರನಹಳ್ಳಿ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಂಡ ಸಾಲೇಬೀರನಹಳ್ಳಿ ಗ್ರಾಮಕ್ಕೆ ಸೇರಿದ ಮೇಲ್ಕಂಡ ಸರ್ವೆ ನಂ. ಜಮೀನುಗಳಿಗೆ ಸಿವಿಲ್ ನ್ಯಾಯಾಲಯವು ಎಲ್.ಎ.ಸಿ. ಸಂಖ್ಯೆ: 33/94 ಪ್ರಕರಣದಲ್ಲಿ ನೀಡಿದ ತೀರ್ಪಿನಂತೆ ಪರಿಹಾರ ರೂ. 1,31,963-00 (ಒಂದು ಲಕ್ಷದ ಮೂವತ್ತೊಂದು ಸಾವಿರದ ಒಂಬೈನೂರ ಅರವತ್ತ್ಮೂರು ರೂಪಾಯಿಗಳು ಮಾತ್ರ) ಗಳನ್ನು ಪಾವತಿಸಿಲು ಅನುಮೋದನೆ ನೀಡಿದೆ.

ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತಃಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.

ಈ ವೆಚ್ಚವನ್ನು 2011-12ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ "4702-00-800-1-00-132-ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು-ಇತ್ಯರ್ಥ-ಬಂಡವಾಳ ವೆಚ್ಚಗಳು" ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ರೂ. 1,31,963-00ಗಳನ್ನು ಹಂಚಿಕೆ ಮಾಡಿ ಬಿಡುಗಡೆ ಮಾಡಿದೆ.

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಕೂಡಲೇ ಸಂಬಂಧಿಸಿದ ಸಣ್ಣ ನೀರಾವರಿ ಅಧಿಕಾರಿಗಳು ವರ್ಗಾವಣೆ ಬಗ್ಗೆ ಕ್ರಮ ಕೈಗೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 01 ಟಿಎಫ್‌ಪಿ 2010, ದಿನಾಂಕ 16-08-2008ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**(ಗೋಪಾಲ್)**

ಸರ್ಕಾರದ ಅಧೀನ ಕಾರ್ಯದರ್ಶಿ

ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

ಪಿ.ಆರ್. 1393

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಯಾದಗೀರ ಜಿಲ್ಲೆ, ಸುರಪೂರ ತಾಲ್ಲೂಕು ಭೈರಮಡ್ಡಿ ಸಣ್ಣ ನೀರಾವರಿ ಕೆರೆ ನಿರ್ಮಾಣ ಕಾಮಗಾರಿಗಾಗಿ ಸ್ವಾಧೀನಪಡಿಸಿಕೊಂಡ ಜಮೀನುಗಳಿಗೆ ನ್ಯಾಯಾಲಯದ ಆದೇಶಾನುಸಾರ ಪರಿಹಾರ ಧನ ಪಾವತಿಸುವ ಬಗ್ಗೆ.

**ಓದಲಾಗಿದೆ :** 1. ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ, (ಉತ್ತರ) ವಲಯ, ಬಿಜಾಪುರ ಇವರ ದಿನಾಂಕ 08–12–2010ರ ಪತ್ರ ಸಂಖ್ಯೆ ಮುಇಂ/ಸನೀ/(ಉ)ವ/ಬಿಜಾ/ಭೂಸ್ವಾಪ್ರ/2010–11/6438.

**ಪ್ರಸ್ತಾವನೆ :**

ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ, (ಉತ್ತರ) ವಲಯ, ಬಿಜಾಪುರ ಇವರು ಮೇಲೆ ಓದಲಾದ ದಿನಾಂಕ 08–12–2010ರ ಪತ್ರದಲ್ಲಿ ಯಾದಗೀರ ಜಿಲ್ಲೆ, ಸುರಪೂರ ತಾಲ್ಲೂಕು ಭೈರಮಡ್ಡಿ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಂಡ ಭೈರಮಡ್ಡಿ ಗ್ರಾಮದ ಜಮೀನುಗಳಿಗೆ ನ್ಯಾಯಾಲಯವು ನೀಡಿರುವ ತೀರ್ಪಿನನುಸಾರ ಹೆಚ್ಚುವರಿ ಪರಿಹಾರ ಧನ ಪಾವತಿಸಲು ಅನುದಾನ ಬಿಡುಗಡೆ ಮಾಡುವಂತೆ ಕೋರಿರುತ್ತಾರೆ.

ಭೂಸ್ವಾಧೀನ ಕಾಯ್ದೆ ಕಲಂ 4(1) ರ ಅಧಿಸೂಚನೆಯನ್ನು ದಿನಾಂಕ 11–01–07 ರಂದು ಹೊರಡಿಸಿದ್ದು, ಸ್ವಾಧೀನಕ್ಕೊಳಪಟ್ಟ ಜಮೀನುಗಳಿಗೆ ಭೂಸ್ವಾಧೀನಾಧಿಕಾರಿಗಳು ದಿನಾಂಕ 12–10–07 ರಂದು ರಚಿಸಿರುವ ಐತೀರ್ಪಿನಲ್ಲಿ ಪ್ರತಿ ಎಕರೆಗೆ ರೂ.45,000/– ಗಳನ್ನು ನಿಗದಿಪಡಿಸಿದೆ. ಪರಿಹಾರ ಪಡೆದ ಭೂಮಾಲೀಕರು ಇನ್ನೂ ಹೆಚ್ಚಿನ ಪರಿಹಾರಕ್ಕಾಗಿ ಭೂಸ್ವಾಧೀನ ಕಾಯ್ದೆ ಕಲಂ 18(1) ರಡಿ ಸುರಪುರ ಸಿವಿಲ್ (ಹಿರಿಯ ಶ್ರೇಣಿ) ನ್ಯಾಯಾಲಯದಲ್ಲಿ ಭೂಸ್ವಾಧೀನ ಪ್ರಕರಣವನ್ನು ದಾಖಲಿಸಿದ್ದು, ಈ ಪ್ರಕರಣದಲ್ಲಿ ಸಿವಿಲ್ ನ್ಯಾಯಾಲಯವು ಪ್ರತಿ ಎಕರೆಗೆ ರೂ.67,060/–ಗಳನ್ನು ನಿಗದಿಪಡಿಸಿ ಶಾಸನಬದ್ಧ ಇತರೆ ಸವಲತ್ತುಗಳೊಂದಿಗೆ ಪಾವತಿಸಲು ಆದೇಶಿಸಿದೆ. ಪ್ರಕರಣದ ವಿವರ ಈ ಕೆಳಕಂಡಂತಿದೆ.

| ಕ್ರ.ಸಂ. | ಎಲ್ಎಸಿ ಸಂಖ್ಯೆ | ಭೈರಮಡ್ಡಿ ಗ್ರಾಮದ ಸರ್ವೆ ನಂಬರ್ | ವಿಸ್ತೀರ್ಣ ಎ–ಗುಂ | ಪರಿಹಾರ ಧನದ ಮೊತ್ತ (ರೂ.ಗಳಲ್ಲಿ) |
|---|---|---|---|---|
| 1 | 32/08 | 76 | 8–11 | 348603 |

*** ಪರಿಹಾರ ಧನದ ಮೊತ್ತದಲ್ಲಿ ನ್ಯಾಯಾಲಯದ ವೆಚ್ಚ ಸಹ ಸೇರಿದೆ.**

ಸಿವಿಲ್ ನ್ಯಾಯಾಲಯದ ತೀರ್ಪಿನ ವಿರುದ್ಧ ಮೇಲ್ಮನವಿ ಸಲ್ಲಿಸುವ ಅಗತ್ಯವಿಲ್ಲವೆಂದು ಕಂದಾಯ ಇಲಾಖೆಯು ಪತ್ರ ಸಂಖ್ಯೆ : ಆರ್‌ಡಿ 421 ಎಲ್‌ಸಿಜಿ 2009, ದಿನಾಂಕ 07–08–2010 ರಂದು ಅಭಿಪ್ರಾಯ ನೀಡಿರುತ್ತದೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 160 ಭೂಸ್ವಾಪ್ರ 2010, ಬೆಂಗಳೂರು, ದಿನಾಂಕ 21ನೇ ಮೇ 2011**

ಗುಲ್ಬರ್ಗಾ ಜಿಲ್ಲೆ, ಸುರಪೂರ ತಾಲ್ಲೂಕು ಭೈರಮಡ್ಡಿ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಂಡ ಭೈರಮಡ್ಡಿ ಗ್ರಾಮಕ್ಕೆ ಸೇರಿದ ಮೇಲ್ಕಂಡ ಸರ್ವೆ ನಂಬರ್ ಜಮೀನಿಗೆ ಸಿವಿಲ್ ನ್ಯಾಯಾಲಯವು ಎಲ್.ಎ.ಸಿ. ಪ್ರಕರಣದಲ್ಲಿ ನೀಡಿದ ತೀರ್ಪಿನಂತೆ ಹಾಗೂ ಭೂಸ್ವಾಧೀನ ಕಾಯ್ದೆಯಲ್ಲಿಯ ಸೂಚನೆಗಳಂತೆ ಲೆಕ್ಕಹಾಕಿದ ಪರಿಹಾರ ಮೊತ್ತ ರೂ.3,48,603–00 (ಮೂರು ಲಕ್ಷದ ನಲ್ವತ್ತೆಂಟು ಸಾವಿರದ ಆರು ನೂರ ಮೂರು ರೂಪಾಯಿಗಳು ಮಾತ್ರ)ಗಳ ಪರಿಹಾರ ಪಾವತಿಸಲು ಈ ಕೆಳಕಂಡ ಷರತ್ತಿಗೊಳಪಟ್ಟು ಅನುಮೋದನೆ ನೀಡಿದೆ.

1. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತಃಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.
2. ಹೆಚ್ಚುವರಿ ಪರಿಹಾರಧನದ ಪಾವತಿಗೆ ಮೊದಲು ಜಮೀನಿನ ಹಕ್ಕುದಾರಿಕೆ ಬಗ್ಗೆ ಖಚಿತಪಡಿಸಿಕೊಂಡು ಪಾವತಿಸತಕ್ಕದ್ದು.
3. ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಸಂಬಂಧಿಸಿದ ಸಹಾಯಕ ಕಾರ್ಯಪಾಲಕ ಇಂಜಿನಿಯರ್‌ರವರು ವರ್ಗಾವಣೆ ಬಗ್ಗೆ ಕೂಡಲೇ ಕ್ರಮ ಕೈಗೊಳ್ಳತಕ್ಕದ್ದು.

ಈ ವೆಚ್ಚವನ್ನು 2011–12ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ "4702–0–800–1–00–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು" ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ರೂ.3,48,603–00 ಗಳನ್ನು ಹಂಚಿಕೆ ಮಾಡಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 01 ಟಿಎಫ್‌ಪಿ 2010, ದಿನಾಂಕ 20–10–10 ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಗೋಪಾಲ್,**

ಸರ್ಕಾರದ ಅಧೀನ ಕಾರ್ಯದರ್ಶಿ,

ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ).

ಪಿ.ಆರ್. 1394

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಕೊಪ್ಪಳ ಜಿಲ್ಲೆ, ಕುಷ್ಟಗಿ ತಾಲ್ಲೂಕು ಟೆಂಗುಂಟೆ ಇಂಗು ಕೆರೆ ನಿರ್ಮಾಣ ಕಾಮಗಾರಿಗಾಗಿ ಸ್ವಾಧೀನಪಡಿಸಿಕೊಂಡ ಜಮೀನುಗಳಿಗೆ ನ್ಯಾಯಾಲಯದ ಆದೇಶಾನುಸಾರ ಹೆಚ್ಚುವರಿ ಪರಿಹಾರ ಪಾವತಿಸುವ ಬಗ್ಗೆ.

**ಓದಲಾಗಿದೆ :** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ, (ಉತ್ತರ) ವಲಯ, ಬಿಜಾಪುರ ರವರ ಪತ್ರ ಸಂಖ್ಯೆ ಮುಇಂ/ಸನೀ(ಉ)ವ/ಬಿಜಾ/ಭೂಸ್ವಾಪ್ರ/2010–11/4317, ದಿನಾಂಕ 28–07–2010.

**ಪ್ರಸ್ತಾವನೆ :**

ಕೊಪ್ಪಳ ಜಿಲ್ಲೆ, ಕುಷ್ಟಗಿ ತಾಲ್ಲೂಕು ಟೆಂಗುಂಟೆ ಇಂಗು ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಟೆಂಗುಂಟೆ ಗ್ರಾಮದ ವಿವಿಧ ಸರ್ವೆ ನಂಬರ್‌ಗಳಲ್ಲಿನ ಜಮೀನುಗಳಿಗೆ ನ್ಯಾಯಾಲಯವು ಎಲ್.ಎ.ಸಿ. ಪ್ರಕರಣದಲ್ಲಿ ನೀಡಿರುವ ಆದೇಶದ ಪ್ರಕಾರ ಹೆಚ್ಚಿನ ಪರಿಹಾರ ಪಾವತಿಸಲು ರೂ.13,42,662–00 ಗಳ ಅನುದಾನ ಬಿಡುಗಡೆ ಮಾಡುವಂತೆ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ, ಉತ್ತರ ವಲಯ, ಬಿಜಾಪುರ ಇವರು ಮೇಲೆ ಕ್ರಮಾಂಕ (1) ರಲ್ಲಿ ಓದಲಾದ ದಿನಾಂಕ 19–04–2011ರ ಪತ್ರದಲ್ಲಿ ಕೋರಿರುತ್ತಾರೆ.

ಭೂಸ್ವಾಧೀನ ಕಾಯ್ದೆ ಕಲಂ 4(1) ರ ಅಧಿಸೂಚನೆಯನ್ನು ದಿನಾಂಕ 03–04–2003 ರಂದು ಹೊರಡಿಸಿದೆ. ಸ್ವಾಧೀನಕ್ಕೊಳಪಟ್ಟ ಜಮೀನುಗಳಿಗೆ ಭೂಸ್ವಾಧೀನಾಧಿಕಾರಿಗಳು ದಿನಾಂಕ 05–01–2005 ರಂದು ರಚಿಸಿರುವ ಐತೀರ್ಪಿನಲ್ಲಿ ಪ್ರತಿ ಎಕರೆ ಜಮೀನಿಗೆ ರೂ.11300–00 ಗಳ ಮಾರುಕಟ್ಟೆ ಬೆಲೆ ನಿಗದಿಪಡಿಸಿರುತ್ತಾರೆ. ಐತೀರ್ಪಿನಂತೆ ಪರಿಹಾರ ಪಡೆದ ಭೂಮಾಲೀಕರು ಇನ್ನೂ ಹೆಚ್ಚಿನ ಪರಿಹಾರ ನೀಡುವಂತೆ ಭೂಸ್ವಾಧೀನ ಕಾಯ್ದೆ ಕಲಂ 18(1)ರಡಿ ಸಿವಿಲ್ ನ್ಯಾಯಾಲಯ (ಹಿರಿಯ ಶ್ರೇಣಿ), ಕುಷ್ಟಗಿ ಇಲ್ಲಿ ಕೆಳಕಂಡ ಪ್ರಕರಣಗಳನ್ನು ಸಲ್ಲಿಸಿದ್ದು, ನ್ಯಾಯಾಲಯವು ದಿನಾಂಕ 31–07–2008 ರಂದು ನೀಡಿದ ತೀರ್ಪಿನಲ್ಲಿ ಪ್ರತಿ ಎಕರೆ ಜಮೀನಿಗೆ ರೂ.1,19,500–00/–ಗಳಂತೆ ಮಾರುಕಟ್ಟೆ ಬೆಲೆಯನ್ನು ನಿಗದಿಪಡಿಸಿ ಮತ್ತಿತರ ಶಾಸನಬದ್ಧ ಸವಲತ್ತುಗಳನ್ನು ನೀಡಲು ಆದೇಶಿಸಿದೆ.

**(ರೂ.ಗಳಲ್ಲಿ)**

| ಕ್ರ.ಸಂ. | ಎಲ್‌ಎಸಿ ಸಂಖ್ಯೆ | ಟೆಂಗುಂಟೆ ಗ್ರಾಮದ ಸರ್ವೆ ನಂಬರ್ | ವಿಸ್ತೀರ್ಣ ಎ–ಗುಂ | ಪರಿಹಾರ ಧನದ ಮೊತ್ತ |
|---|---|---|---|---|
| 1 | 75/07 | 25/1ಉ | 0–05 | 40130 |
| 2 | 76/07 | 25/1ಇ | 0–03 | 24279 |
| 3 | 77/07 | 25/1ಈ | 1–00 | 317529 |
| 4 | 78/07 | 26/2 | 0–14 | 102820 |
| 5 | 79/07 | 25/1ಎ | 1–00 | 317529 |
| 6 | 80/07 | 25/ಆ | 0–12 | 95608 |
| 7 | 81/07 | 26/1 | 1–00 | 317529 |
| 8 | 82/07 | 25/ಊ | 0–10 | 79757 |
| | | **ಒಟ್ಟು** | | **1295181** |

ಮೇಲ್ಕಂಡ ಆದೇಶದ ವಿರುದ್ಧ ಮೇಲ್ಮನವಿ ಸಲ್ಲಿಸಲು ಇದು ಅರ್ಹ ಪ್ರಕರಣ ಅಲ್ಲವೆಂದು ಕಂದಾಯ ಇಲಾಖೆಯ ಕಾನೂನು ಕೋಶವು ಪತ್ರ ಸಂಖ್ಯೆ : ಆರ್‌ಡಿ 423 ಎಲ್‌ಸಿಜಿ 2009, ದಿನಾಂಕ 23–05–2009 ರಲ್ಲಿ ಅಭಿಪ್ರಾಯಪಟ್ಟಿರುತ್ತದೆ.

ಮೇಲ್ಕಂಡ ಎಲ್ಲಾ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿ, ಸರ್ಕಾರವು ಈ ಮುಂದಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 111 ಭೂಸ್ವಾಪ್ರ 2010, ಬೆಂಗಳೂರು, ದಿನಾಂಕ 21ನೇ ಮೇ 2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ ಕೊಪ್ಪಳ ಜಿಲ್ಲೆ, ಕುಷ್ಟಗಿ ತಾಲ್ಲೂಕು, ಟೆಂಗುಂಟೆ ಇಂಗು ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಟೆಂಗುಂಟೆ ಗ್ರಾಮದ ವಿವಿಧ ಸರ್ವೆ ನಂಬರ್‌ಗಳಲ್ಲಿನ ಜಮೀನುಗಳಿಗೆ ನ್ಯಾಯಾಲಯದ ಆದೇಶದಂತೆ ಪರಿಹಾರ ರೂ.12,95,181–00 ಗಳ (ಹನ್ನೆರಡು ಲಕ್ಷದ ತೊಂಭತ್ತೈದು ಸಾವಿರದ ನೂರ ಎಂಭತ್ತೊಂದು ರೂಪಾಯಿಗಳು ಮಾತ್ರ)ಗಳನ್ನು ಪಾವತಿಸಲು ಸರ್ಕಾರವು ಈ ಕೆಳಕಂಡ ಷರತ್ತಿಗಳಿಗೊಳಪಟ್ಟು ಅನುಮೋದನೆ ನೀಡಿದೆ.

1. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತಃಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.
2. ಹೆಚ್ಚುವರಿ ಪರಿಹಾರ ಪಾವತಿಗೆ ಮೊದಲು ಜಮೀನಿನ ಹಕ್ಕುದಾರಿಕೆ ಬಗ್ಗೆ ಖಚಿತಪಡಿಸಿಕೊಂಡು ಪಾವತಿಸತಕ್ಕದ್ದು.
3. ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಸಂಬಂಧಿಸಿದ ಸಹಾಯಕ ಕಾರ್ಯಪಾಲಕ ಇಂಜಿನಿಯರ್‌ರವರು ವರ್ಗಾವಣೆ ಬಗ್ಗೆ ಕೂಡಲೇ ಕ್ರಮ ಕೈಗೊಳ್ಳತಕ್ಕದ್ದು.

ಈ ವೆಚ್ಚವನ್ನು 2011–12ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ "4702–00–800–1–00–132 ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ– ಬಂಡವಾಳ ವೆಚ್ಚಗಳು" ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ರೂ.12,95,181–00 ಗಳನ್ನು ಹಂಚಿಕೆ ಮಾಡಿ ಬಿಡುಗಡೆ ಮಾಡಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2010, ದಿನಾಂಕ 20–10–2010 ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಅಧಿಕಾರ ಪ್ರತ್ಯಾಯೋಜನೆ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಗೋಪಾಲ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ).

ಪಿ.ಆರ್. 1395

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಗುಲ್ಬರ್ಗಾ ಜಿಲ್ಲೆ, ಗುಲ್ಬರ್ಗಾ ತಾಲ್ಲೂಕಿನ ಭುಯ್ಯಾರ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಂಡ ಜಮೀನುಗಳಿಗೆ ನ್ಯಾಯಾಲಯದ ಆದೇಶದಂತೆ ಪರಿಹಾರ ವಿತರಿಸುವ ಬಗ್ಗೆ.

**ಓದಲಾಗಿದೆ :** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ, ಉತ್ತರ ವಲಯ, ಬಿಜಾಪುರ ಇವರ ಪತ್ರ ಸಂಖ್ಯೆ ಮುಇಂ/ಸನೀ(ಉ)ವ/ಬಿಜಾ/ಭೂಸ್ವಾಪ್ರ/2010–11/4710, ದಿನಾಂಕ 18–08–10.

**ಪ್ರಸ್ತಾವನೆ :**

ಗುಲ್ಬರ್ಗಾ ಜಿಲ್ಲೆ, ಗುಲ್ಬರ್ಗಾ ತಾಲ್ಲೂಕು ಭುಯ್ಯಾರ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಅಂತಪನಾಳ ಗ್ರಾಮದ ಜಮೀನುಗಳಿಗೆ ಗುಲ್ಬರ್ಗಾದ ಪ್ರಿನ್ಸಿಪಲ್ ಸಿವಿಲ್ ನ್ಯಾಯಾಲಯದ (ಹಿರಿಯ ಶ್ರೇಣಿ) ಆದೇಶಾನುಸಾರ ಪರಿಹಾರ ಪಾವತಿಸಲು ರೂ. 4,01,297–00 ಅನುದಾನ ಬಿಡುಗಡೆ ಮಾಡುವಂತೆ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ, ಉತ್ತರ ವಲಯ, ಧಾರವಾಡ ಇವರು ಮೇಲೆ ಓದಲಾದ ದಿನಾಂಕ 18–08–2010ರ ಪತ್ರದಲ್ಲಿ ಕೋರಿದ್ದಾರೆ.

ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1) ರಡಿ ಅಧಿಸೂಚನೆಯನ್ನು ದಿನಾಂಕ 13–01–1994 ರಂದು ಹೊರಡಿಸಿದೆ. ಭೂಸ್ವಾಧೀನಾಧಿಕಾರಿಗಳು ದಿನಾಂಕ 18–07–1996 ರಂದು ಐತೀರ್ಪು ರಚಿಸಿದ್ದಾರೆ. ಭೂಸ್ವಾಧೀನಾಧಿಕಾರಿಗಳು ರಚಿಸಿದ ಐತೀರ್ಪಿನಂತೆ ಪರಿಹಾರ ಪಡೆದು, ಹೆಚ್ಚಿನ ಪರಿಹಾರಕ್ಕಾಗಿ ಭೂಸ್ವಾಧೀನ ಕಾಯ್ದೆ ಕಲಂ 18(1)ರಡಿ ಗುಲ್ಬರ್ಗಾದ ಪ್ರಿನ್ಸಿಪಲ್ ಸಿವಿಲ್ ನ್ಯಾಯಾಲಯ ಇಲ್ಲಿ ಸಲ್ಲಿಸಿದ ಎಲ್.ಎ.ಸಿ. ಸಂಖ್ಯೆ : 1504/97 ನ್ನು ಪರಿಶೀಲಿಸಿ ದಿನಾಂಕ 22–12–2001 ರಂದು ನೀಡಿದ ಆದೇಶದಲ್ಲಿ ಜಮೀನಿನ ಮಾರುಕಟ್ಟೆ ಬೆಲೆಯನ್ನು ರೂ. 48,000–00 ಗಳಿಗೆ ನಿಗದಿಪಡಿಸಿದೆ. ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿದೆ. ಈ ತೀರ್ಪಿನ ವಿರುದ್ಧ ಭೂಸ್ವಾಧೀನಾಧಿಕಾರಿಗಳು ಉಚ್ಚ ನ್ಯಾಯಾಲಯದಲ್ಲಿ ಎಂ.ಎಫ್.ಎ. ಸಂಖ್ಯೆ 2741/02ನ್ನು ಸಲ್ಲಿಸಿದ್ದು, ಈ ಮೇಲ್ಮನವಿಯು ದಿನಾಂಕ 16–07–02 ರಂದು ವಜಾ ಮಾಡಿದೆ. ಎಲ್.ಎ.ಸಿ. ಪ್ರಕರಣದಲ್ಲಿ ನಿಗದಿಪಡಿಸಿದ್ದ ಭೂಮಿಯ ಮೌಲ್ಯಕ್ಕೆ ತೃಪ್ತರಾಗದ ಭೂಮಾಲೀಕರು ಇನ್ನೂ ಹೆಚ್ಚಿನ ಪರಿಹಾರಕ್ಕಾಗಿ ಉಚ್ಚ ನ್ಯಾಯಾಲಯದಲ್ಲಿ ಎಂ.ಎಫ್.ಎ. ಸಂಖ್ಯೆ 5934/03 ನ್ನು ಸಲ್ಲಿಸಿದ್ದು, ನ್ಯಾಯಾಲಯವು ಪ್ರತಿ ಎಕರೆಗೆ ರೂ. 60,000/–ಗಳನ್ನು ನಿಗದಿಪಡಿಸಿದೆ.

| ಕ್ರ.ಸಂ. | ಎಲ್ಎಸಿ ಸಂಖ್ಯೆ | ಎಂ.ಎಫ್.ಎ. | ಅಂತಪನಾಳ ಗ್ರಾಮದ ಸ.ನಂ. | ವಿಸ್ತೀರ್ಣ ಎ–ಗುಂ | ಪರಿಹಾರ ಮೊತ್ತ (ರೂ.ಗಳಲ್ಲಿ) |
|---|---|---|---|---|---|
| 1 | 1564/97 | 5934/03 | 29/2 | 7–00 | 3,67,567–00 |
| **ಒಟ್ಟು** | | | | | **3,67,567–00** |

ಈ ತೀರ್ಪಿನ ವಿರುದ್ಧ ಮೇಲ್ಮನವಿ ಸಲ್ಲಿಸದಿರಲು ಕಾನೂನು ಇಲಾಖೆಯು ಪತ್ರ ಸಂಖ್ಯೆ : ಲಾ 2354 ಎಲ್ಎಸ್ಪಿ 2007, ದಿನಾಂಕ 15–12–2007 ರಲ್ಲಿ ಅಭಿಪ್ರಾಯ ನೀಡಿದೆ. ಪಾವತಿಸಬೇಕಾದ ಪರಿಹಾರ ಧನದ ವಿವರ ಕೆಳಕಂಡಂತಿದೆ :

ಪ್ರಸ್ತಾವನೆಯನ್ನು ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 145 ಭೂಸ್ವಾಪ್ರ 2010, ಬೆಂಗಳೂರು, ದಿನಾಂಕ 21ನೇ ಮೇ 2011**

ಗುಲ್ಬರ್ಗಾ ಜಿಲ್ಲೆ, ಗುಲ್ಬರ್ಗಾ ತಾಲ್ಲೂಕು ಭುಯ್ಯಾರ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಂಡ ಅಂತಪನಾಳ ಗ್ರಾಮದ ಜಮೀನುಗಳಿಗೆ ನ್ಯಾಯಾಲಯದ ಆದೇಶದಂತೆ ಲೆಕ್ಕಹಾಕಿದ ಪರಿಹಾರ ಮೊತ್ತ ರೂ.3,67,567–00 ಗಳನ್ನು (ಮೂರು ಲಕ್ಷದ ಅರವತ್ತೇಳು ಸಾವಿರದ ಐನೂರ ಅರವತ್ತೇಳು ರೂಪಾಯಿಗಳು ಮಾತ್ರ) ಪಾವತಿಸಲು ಸರ್ಕಾರವು ಈ ಕೆಳಕಂಡ ಷರತ್ತಿಗಳಿಗೊಳಪಟ್ಟು ಅನುಮೋದನೆ ನೀಡಿದೆ.

1. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತಃಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.
2. ಹೆಚ್ಚುವರಿ ಪರಿಹಾರಧನದ ಪಾವತಿಗೆ ಮೊದಲು ಜಮೀನಿನ ಹಕ್ಕುದಾರಿಕೆ ಬಗ್ಗೆ ಖಚಿತಪಡಿಸಿಕೊಂಡು ಪಾವತಿಸತಕ್ಕದ್ದು.
3. ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಸಂಬಂಧಿಸಿದ ಸಹಾಯಕ ಕಾರ್ಯಪಾಲಕ ಇಂಜಿನಿಯರ್‌ರವರು ವರ್ಗಾವಣೆ ಬಗ್ಗೆ ಕೂಡಲೇ ಕ್ರಮ ಕೈಗೊಳ್ಳತಕ್ಕದ್ದು.

ಈ ವೆಚ್ಚವನ್ನು 2011–12ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ "4702–00–800–1–00–132–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ – ಬಂಡವಾಳ ವೆಚ್ಚಗಳು" ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ರೂ.3,67,567–00 ಗಳನ್ನು ಹಂಚಿಕೆ ಮಾಡಿ, ಬಿಡುಗಡೆ ಮಾಡಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2010, ದಿನಾಂಕ 20–10–10 ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಗೋಪಾಲ್,**

ಪಿ.ಆರ್. 1396

ಸರ್ಕಾರದ ಅಧೀನ ಕಾರ್ಯದರ್ಶಿ,

ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ).

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಶಿವಮೊಗ್ಗ ಜಿಲ್ಲೆ, ಶಿಕಾರಿಪುರ ತಾಲ್ಲೂಕು ಹೊಸೂರು ಹೋಬಳಿ ಮುರುಗಣ್ಣನಕೆರೆ ಕೆರೆ ಏರಿ ಮತ್ತು ಕೋಡಿ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ಭೂಸ್ವಾಧೀನ ಕಾಯ್ದೆ ಕಲಂ 28(ಎ)ರ ಐತೀರ್ಪಿನಂತೆ ಹೆಚ್ಚಿನ ಪರಿಹಾರಧನ ಪಾವತಿಸುವ ಬಗ್ಗೆ.

**ಓದಲಾಗಿದೆ :** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ, ದಕ್ಷಿಣ ವಲಯ, ಬೆಂಗಳೂರು ಇವರ ಪತ್ರ ಸಂಖ್ಯೆ ಮುಸದ /ಲೆಶಾಖೆ/ಲೆಸ–1–3/ಭೂಸ್ವಾಧೀನ/10–11/2197, ದಿನಾಂಕ 01–10–2010.

**ಪ್ರಸ್ತಾವನೆ :**

ಶಿವಮೊಗ್ಗ ಜಿಲ್ಲೆ, ಶಿಕಾರಿಪುರ ತಾಲ್ಲೂಕು ಹೊಸೂರು ಹೋಬಳಿ ಮುರುಗಣ್ಣನಕೆರೆ ಕೆರೆ ಏರಿ ಮತ್ತು ಕೋಡಿ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಹುಲುಗಿನಕಟ್ಟೆ ಗ್ರಾಮಕ್ಕೆ ಸೇರಿದ ಸ.ನಂ.ಗಳ ಜಮೀನಿಗೆ ಉಪ ವಿಭಾಗಾಧಿಕಾರಿ ಹಾಗೂ ಭೂಸ್ವಾಧೀನಾಧಿಕಾರಿಗಳು, ಸಾಗರ ಉಪ ವಿಭಾಗ, ಸಾಗರ ಇವರು ಭೂಸ್ವಾಧೀನ ಕಾಯ್ದೆ ಕಲಂ 28(ಎ)ರಡಿ ಹೊರಡಿಸಿದ ಐತೀರ್ಪಿನಂತೆ ಪರಿಹಾರ ಧನ ಪಾವತಿಸಲು ರೂ. 15,03,187–00 ಗಳನ್ನು ಬಿಡುಗಡೆ ಮಾಡುವಂತೆ ಮೇಲೆ ಓದಲಾದ ದಿನಾಂಕ 01–10–10ರ ಪತ್ರದಲ್ಲಿ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ, ದಕ್ಷಿಣ ವಲಯ, ಬೆಂಗಳೂರು ಇವರು ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಮುರುಗಣ್ಣನಕೆರೆ ಕೆರೆ ಏರಿ ಮತ್ತು ಕೋಡಿ ನಿರ್ಮಾಣಕ್ಕಾಗಿ ಅಗತ್ಯವಿದ್ದ ಜಮೀನುಗಳ ಸ್ವಾಧೀನಕ್ಕಾಗಿ 4(1)ರ ಅಧಿಸೂಚನೆಯನ್ನು ದಿನಾಂಕ 12–08–2000 ರಲ್ಲಿ ಹೊರಡಿಸಿದ್ದು, ಸ್ವಾಧೀನಪಡಿಸಿಕೊಂಡ ಜಮೀನಿಗೆ ಪರಿಹಾರ ಧನದ ಐತೀರ್ಪನ್ನು ಭೂಸ್ವಾಧೀನಾಧಿಕಾರಿಗಳು, ದಿನಾಂಕ 19–05–2003 ರಂದು ಹೊರಡಿಸಿರುತ್ತಾರೆ. ಈ ಐತೀರ್ಪಿನಲ್ಲಿ ಸೇರಿದ್ದ ಹುಲುಗಿನಕಟ್ಟೆ ಗ್ರಾಮದ ಜಮೀನುಗಳಿಗೆ ಎಲ್.ಎ.ಸಿ. ಸಂಖ್ಯೆ 40/07 ರಿಂದ 56/07 ರಲ್ಲಿ ಸೊರಬ ವ್ಯವಹಾರ ನ್ಯಾಯಾಲಯ (ಹಿರಿಯ ಶ್ರೇಣಿ) ಇಲ್ಲಿ ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿದೆ.

ಸಿವಿಲ್ ನ್ಯಾಯಾಲಯದ ತೀರ್ಪನ್ನು ಉಲ್ಲೇಖಿಸಿ ಭೂಸ್ವಾಧೀನ ಪ್ರಕ್ರಿಯೆಯಲ್ಲಿ ಸೇರಿದ್ದ ಹುಲುಗಿನಕಟ್ಟೆ ಗ್ರಾಮದ ಇತರೆ ಸ.ನಂ.ಗಳಿಗೆ ಸೇರಿದ ಜಮೀನಿನ ಭೂಮಾಲೀಕರು ಭೂಸ್ವಾಧೀನ ಕಾಯ್ದೆ ಕಲಂ 28(ಎ)ರಡಿ ಹೆಚ್ಚಿನ ಪರಿಹಾರ ಧನ ನೀಡುವಂತೆ ಕೋರಿ ಸಲ್ಲಿಸಿದ್ದ ಅರ್ಜಿಗಳ ಬಗ್ಗೆ ವಿಚಾರಣೆ ನಡೆಸಿ ಉಪ ವಿಭಾಗಾಧಿಕಾರಿ ಹಾಗೂ ಭೂಸ್ವಾಧೀನಾಧಿಕಾರಿಗಳು, ಸಾಗರ ಉಪ ವಿಭಾಗ, ಸಾಗರ ಇವರು ಭೂಸ್ವಾಧೀನ ಕಾಯ್ದೆ ಕಲಂ 28(ಎ)ರಡಿ ದಿನಾಂಕ 11–03–2011 ರಂದು ಐತೀರ್ಪನ್ನು ಹೊರಡಿಸಿರುತ್ತಾರೆ.

ಈ ಭೂಸ್ವಾಧೀನ ಪ್ರಕರಣದಲ್ಲಿ 4(1)ರ ಅಧಿಸೂಚನೆಯನ್ನು ದಿನಾಂಕ 12–08–2000 ರಂದು ಹೊರಡಿಸಲಾಗಿದ್ದು, ಸ್ವಾಧೀನಕ್ಕೊಳಪಟ್ಟ ಜಮೀನಿನ ಕಬ್ಜೆಯನ್ನು ದಿನಾಂಕ 15–06–1995 ರಂದು ಪಡೆಯಲಾಗಿದೆ. ಸಲ್ಲಿಸಲಾಗಿರುವ ಲೆಕ್ಕಾಚಾರ ತಃಖ್ತೆಯನ್ನು ಪರಿಶೀಲಿಸಿದಾಗ ಪರಿಹಾರ ಮೊತ್ತವನ್ನು ಕಬ್ಜೆ ದಿನಾಂಕದಿಂದ ಲೆಕ್ಕ ಹಾಕಲಾಗಿದೆ. ಆದರೆ, ಸರ್ವೋಚ್ಚ ನ್ಯಾಯಾಲಯವು ಆರ್.ಎಲ್. ಜೈನ್ ಪ್ರಕರಣದಲ್ಲಿ ನೀಡಿರುವ ತೀರ್ಪಿನ ಪ್ರಕಾರ ಶಾಸನಬದ್ಧ ಸವಲತ್ತುಗಳನ್ನು 4(1)ರ ಅಧಿಸೂಚನೆ ಹೊರಡಿಸಿದ ದಿನಾಂಕದಿಂದ ನೀಡಬೇಕಾಗುತ್ತದೆ. ಅದರಂತೆ ಲೆಕ್ಕ ಹಾಕಿದ್ದು, ಪಾವತಿಸಬೇಕಾದ ಸ.ನಂ.ವಾರು ಮೊತ್ತದ ವಿವರ ಕೆಳಕಂಡಂತಿದೆ :

| ಭೂ.ಸ್ವಾ. ಕಾಯ್ದೆ ಕಲಂ 28(ಎ) ರಡಿ ಐತೀರ್ಪಿನ ಸಂಖ್ಯೆ ಮತ್ತು ದಿನಾಂಕ ಎಲ್‌ಎಸಿ/2/2000–01 ದಿನಾಂಕ 11–03–2011 | | | |
|---|---|---|---|
| ಕ್ರ.ಸಂ. | ಹುಲಗಿನಕಟ್ಟೆ ಗ್ರಾಮದ ಸ.ನಂ. | ವಿಸ್ತೀರ್ಣ ಎ–ಗುಂ | ಪರಿಹಾರ ಮೊತ್ತ ರೂ.ಗಳಲ್ಲಿ |
| 1 | 106/2 | 1–31 | 339249 |
| 2 | 106/3 | 0–01 | 268379 |
| 3 | 113/2 | 0–10 | 53131 |
| 4 | 113/4 | 0–01 | 6546 |
| 5 | 107/1 | 1–02 | 228981 |
| 6 | 82 | 0–2.75 | 18001 |
| 7 | 27/2 | 0–01 | 6546 |
| 8 | 27/3 | 0–01 | 6546 |
| 9 | 109 | 0–11.2 | 9819 |
| 10 | 27/5 | 0–1.14 | 7431 |
| 11 | 27/6 | 0–11.4 | 7431 |
| 12 | 27/7 | 0–11.2 | 8919 |
| 13 | 27/8 | 0–01 | 5946 |
| 14 | 27/9 | 0–11.4 | 7431 |
| 15 | 27/11 | 0–1.2 | 2973 |
| 16 | 32/1 | 0–11.4 | 8182 |
| 17 | 32/2 | 0–11.4 | 8182 |
| 18 | 32/5 | 0–01 | 6546 |
| 19 | 32/1 | 0–11.4 | 8182 |
| 20 | 27/1 | 0–11.2 | 8919 |
| 21 | 105 | 2–00 | 434020 |
| ಒಟ್ಟು | | | **1451360** |

ಮೇಲ್ಕಂಡ ಎಲ್ಲಾ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿ, ಸರ್ಕಾರವು ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 149 ಭೂಸ್ವಾಪ್ರ 2010, ಬೆಂಗಳೂರು, ದಿನಾಂಕ 21ನೇ ಮೇ 2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ ಶಿವಮೊಗ್ಗ ಜಿಲ್ಲೆ, ಶಿಕಾರಿಪುರ ತಾಲ್ಲೂಕಿನ ಮುರುಗಣ್ಣನ ಕೆರೆ ಏರಿ ಮತ್ತು ಕೋಡಿ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಹುಲುಗಿನಕಟ್ಟೆ ಗ್ರಾಮದ ಜಮೀನುಗಳಿಗೆ ಉಪ ವಿಭಾಗಾಧಿಕಾರಿ ಮತ್ತು ಭೂಸ್ವಾಧೀನಾಧಿಕಾರಿಗಳು, ಸಾಗರ ಉಪ ವಿಭಾಗ, ಸಾಗರ ಇವರು ಭೂಸ್ವಾಧೀನ ಕಾಯ್ದೆ ಕಲಂ 28(ಎ)ರಡಿ ಹೊರಡಿಸಿರುವ ಐತೀರ್ಪಿನಂತೆ ಪರಿಹಾರ ರೂ. 14,51,360–00 ಗಳನ್ನು (ಹದಿನಾಲ್ಕು ಲಕ್ಷದ ಐವತ್ತೊಂದು ಸಾವಿರದ ಮುನ್ನೂರ ಅರವತ್ತು ರೂಪಾಯಿಗಳು ಮಾತ್ರ) ಈ ಕೆಳಕಂಡ ಷರತ್ತಿಗಳಿಗೊಳಪಟ್ಟು ನೀಡಲು ಸರ್ಕಾರದ ಅನುಮೋದನೆ ನೀಡಿದೆ.

1. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತಃಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.
2. ಹೆಚ್ಚುವರಿ ಪರಿಹಾರ ಧನದ ಪಾವತಿಗೆ ಮೊದಲು ಜಮೀನಿನ ಹಕ್ಕುದಾರಿಕೆ ಬಗ್ಗೆ ಖಚಿತಪಡಿಸಿಕೊಂಡು ಪಾವತಿಸತಕ್ಕದ್ದು.
3. ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಸಂಬಂಧಿಸಿದ ಸಣ್ಣ ನೀರಾವರಿ ಅಧಿಕಾರಿಗಳು ವರ್ಗಾವಣೆ ಬಗ್ಗೆ ಕೂಡಲೇ ಕ್ರಮ ಕೈಗೊಳ್ಳತಕ್ಕದ್ದು.

ಈ ವೆಚ್ಚವನ್ನು 2011–12ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ "4702–00–800–1–00–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ– 132 ಬಂಡವಾಳ ವೆಚ್ಚಗಳು" ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ರೂ.14,51,360–00 ಗಳನ್ನು ಹಂಚಿಕೆ ಮಾಡಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2010, ದಿನಾಂಕ 20–10–2010 ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದ್ವನಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಗೋಪಾಲ್,**
ಪಿ.ಆರ್. 1397 ಸರ್ಕಾರದ ಅಧೀನ ಕಾರ್ಯದರ್ಶಿ,
ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ).

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಬಿಜಾಪುರ ಜಿಲ್ಲೆ ಮತ್ತು ತಾಲ್ಲೂಕು, ಧನರ್ಗಿ ಗ್ರಾಮದ ಹತ್ತಿರ ಕೆರೆ ನಿರ್ಮಾಣಕ್ಕಾಗಿ ಅಗತ್ಯವಿರುವ ಜಮೀನಿನ ಭೂಸ್ವಾಧೀನ ಪ್ರಕ್ರಿಯೆಗಾಗಿ ಮುಂಗಡ ಹಣ ಠೇವಣಿ ಮಾಡುವ ಬಗ್ಗೆ.

**ಓದಲಾಗಿದೆ :** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ, ಉತ್ತರ ವಲಯ, ಬಿಜಾಪುರ ಇವರ ಪತ್ರ ಸಂಖ್ಯೆ ಮುಇಂ/ಸನೀ(ಉ)ವ/ಬಿಜಾ/ಭೂಸ್ವಾಪ್ರ/2010–11/1045, ದಿನಾಂಕ 24–02–2011.

**ಪ್ರಸ್ತಾವನೆ :**

ಬಿಜಾಪುರ ಜಿಲ್ಲೆ ಮತ್ತು ತಾಲ್ಲೂಕಿನ ಧನರ್ಗಿ ಗ್ರಾಮದ ಹತ್ತಿರ ಕೆರೆ ನಿರ್ಮಾಣಕ್ಕಾಗಿ ಅಗತ್ಯವಿರುವ ಜಮೀನಿನ ಭೂಸ್ವಾಧೀನ ಪ್ರಕ್ರಿಯೆಯಲ್ಲಿ ಅವಾರ್ಡ್ ಪೂರ್ವ ಮುಂಗಡ ಹಣವನ್ನು ಭೂಸ್ವಾಧೀನಾಧಿಕಾರಿಗಳಲ್ಲಿ ಠೇವಣಿ ಮಾಡಲು ಅನುದಾನ ಬಿಡುಗಡೆ ಮಾಡುವಂತೆ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ, ಉತ್ತರ ವಲಯ, ಬಿಜಾಪುರ ಇವರು ಮೇಲೆ ಓದಲಾದ ದಿನಾಂಕ 24–02–2011ರ ಪತ್ರದಲ್ಲಿ ಕೋರಿದ್ದಾರೆ.

ಕಂದಾಯ ಇಲಾಖೆಯ ಸುತ್ತೋಲೆ ಸಂಖ್ಯೆ ಕಂಇ 42 ಭೂಸ್ವಾಹಾ 2000, ದಿನಾಂಕ 08–10–2001 ರಲ್ಲಿ ಸೂಚಿಸಿರುವಂತೆ 4(1) ರ ಅಧಿಸೂಚನೆ ಹೊರಡಿಸುವ ಪೂರ್ವದಲ್ಲಿ ಭೂಸ್ವಾಧೀನ ಪ್ರಕ್ರಿಯೆಗಾಗಿ ಸಂಭವನೀಯ ವೆಚ್ಚದ ಶೇ.50% ಮುಂಗಡ ಹಣವನ್ನು ಭೂಸ್ವಾಧೀನಾಧಿಕಾರಿಗಳಲ್ಲಿ ಠೇವಣಿ ಮಾಡಬೇಕಾಗಿದೆ.

ಪ್ರಸ್ತಾವವನ್ನು ಪರಿಶೀಲಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 35 ಭೂಸ್ವಾಪ್ರ 2011, ಬೆಂಗಳೂರು, ದಿನಾಂಕ 26ನೇ ಮೇ 2011**

ಬಿಜಾಪುರ ಜಿಲ್ಲೆ ಮತ್ತು ತಾಲ್ಲೂಕು, ಧನರ್ಗಿ ಗ್ರಾಮದ ಹತ್ತಿರ ಕೆರೆ ನಿರ್ಮಾಣಕ್ಕಾಗಿ ಅಗತ್ಯವಿರುವ ಜಮೀನಿನ ಸ್ವಾಧೀನಕ್ಕಾಗಿ ಭೂಸ್ವಾಧೀನ ಪ್ರಕ್ರಿಯೆಗಾಗಿ ಮುಂಗಡ ಹಣ ರೂ.10,25,285–00 ಗಳನ್ನು (ಹತ್ತು ಲಕ್ಷದ ಇಪ್ಪತ್ತೈದು ಸಾವಿರದ ಇನ್ನೂರ ಎಂಭತ್ತೈದು ರೂಪಾಯಿಗಳು ಮಾತ್ರ) ಭೂಸ್ವಾಧೀನಾಧಿಕಾರಿಗಳಲ್ಲಿ ಠೇವಣಿ ಮಾಡಲು ಅನುಮೋದನೆ ನೀಡಿದೆ.

ಈ ವೆಚ್ಚವನ್ನು 2011–12ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ "4702–00–800–1–11–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ– 132 ಬಂಡವಾಳ ವೆಚ್ಚಗಳು" ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ರೂ.10,25,285–00 ಗಳನ್ನು ಹಂಚಿಕೆ ಮಾಡಿ ಬಿಡುಗಡೆ ಮಾಡಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2010, ದಿನಾಂಕ 20–10–2010 ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಅಧಿಕಾರ ಪ್ರತ್ಯಾಯೋಜನೆ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಗೋಪಾಲ್,**
ಪಿ.ಆರ್. 1398 ಸರ್ಕಾರದ ಅಧೀನ ಕಾರ್ಯದರ್ಶಿ,
ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ).

## ಜಲಸಂಪನ್ಮೂಲ ಸಚಿವಾಲಯ

### ತಿದ್ದುಪಡಿ

**ಸಂ : ಸನೀಇ 149 ಭೂಸ್ವಾಪ್ರ 2010, ಬೆಂಗಳೂರು, ದಿನಾಂಕ 26ನೇ ಮೇ 2011**

ಸರ್ಕಾರದ ಆದೇಶ ಸಂ : ಸನೀಇ 149 ಭೂಸ್ವಾಪ್ರ 2010, ದಿನಾಂಕ 21-05-2011ರ ಆದೇಶದ ಪುಟ-3ರ 2ನೇ ಪ್ಯಾರಾದ 3ನೇ ಸಾಲಿನಲ್ಲಿ ಕೆಳಕಂಡಂತೆ ಸೇರಿಸಿ ಓದಿಕೊಳ್ಳತಕ್ಕದ್ದು.

**'ರೂ. 14,51,360.00 ಗಳನ್ನು ಹಂಚಿಕೆ ಮಾಡಿ ಬಿಡುಗಡೆ ಮಾಡಿದೆ.'**

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಗೋಪಾಲ್,**

ಪಿ.ಆರ್. 1399 ಸರ್ಕಾರದ ಅಧೀನ ಕಾರ್ಯದರ್ಶಿ,

ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ).

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಕರ್ನಾಟಕ ಸರ್ಕಾರ ಸಚಿವಾಲಯದ ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆಯಲ್ಲಿ ನಿರ್ವಹಿಸುತ್ತಿರುವ "ರೇಷ್ಮೆ ಕೃಷಿ" ವಿಷಯವನ್ನು ತೋಟಗಾರಿಕೆ ಇಲಾಖೆಗೆ ವರ್ಗಾಯಿಸುವ ಬಗ್ಗೆ.

**ಓದಲಾಗಿದೆ :** ಸರ್ಕಾರದ ಮುಖ್ಯ ಕಾರ್ಯದರ್ಶಿಯವರ ಟಿಪ್ಪಣಿ ಸಂ : ಮುಕಾ/4021/ಕಂಪ್ಯೂಟರ್/2011, ದಿನಾಂಕ 04-05-2011.

**ಪ್ರಸ್ತಾವನೆ :**

ಕರ್ನಾಟಕ ಸರ್ಕಾರದ (ಕೆಲಸಗಳ ಹಂಚಿಕೆ) ನಿಯಮಗಳು 1977ರ ಅನುಸೂಚಿ – IV ರನ್ವಯ ವಾಣಿಜ್ಯ ಮತ್ತು ಕೈಗಾರಿಕಾ ಇಲಾಖೆಯಲ್ಲಿ ಭಾರಿ ಮತ್ತು ಮಧ್ಯಮ ಪ್ರಮಾಣದ ಕೈಗಾರಿಕೆಗಳು, ಸಣ್ಣ ಪ್ರಮಾಣದ ಕೈಗಾರಿಕೆಗಳು, ಜವಳಿ, ಗಣಿ ಮತ್ತು ಭೂವಿಜ್ಞಾನ, ಕಬ್ಬಿಣ ಉಕ್ಕು ಮತ್ತಿತರ ವಸ್ತುಗಳಿಗೆ ಸಂಬಂಧಪಟ್ಟ ನಾಗರಿಕ ಸರಬರಾಜು, ನಾಗರಿಕ ವಿಮಾನಯಾನ ಮತ್ತು ರೇಷ್ಮೆ ಕೃಷಿ ವಿಷಯಗಳಿಗೆ ಸಂಬಂಧಪಟ್ಟಂತೆ ಕಾರ್ಯನಿರ್ವಹಿಸಲಾಗುತ್ತಿದೆ. ರೇಷ್ಮೆ ಕ್ಷೇತ್ರದ ನಿರೂಪಣೆ ಹಾಗೂ ಅಭಿವೃದ್ಧಿಯತ್ತ ಹೆಚ್ಚಿನ ಗಮನ ಹರಿಸುವ ಅವಶ್ಯಕತೆ ಇರುವುದರಿಂದ ಹಾಗೂ ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆಯಲ್ಲಿ ಗಣಿ ನಿಬಂಧನೆ ಹಾಗೂ ಗಣಿ ಸಂಬಂಧಿತ ಹೆಚ್ಚಿನ ಕಾರ್ಯಭಾರದ ಒತ್ತಡ ಇರುವುದರಿಂದ ರೇಷ್ಮೆ ಕೃಷಿಗೆ ಸಂಬಂಧಪಟ್ಟ ವಿಷಯವನ್ನು ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆಯಿಂದ ಬೇರ್ಪಡಿಸುವುದು ಸೂಕ್ತವೆಂದು ಕಂಡುಬಂದಿರುತ್ತದೆ. ಇದಲ್ಲದೆ ರೇಷ್ಮೆ ಕೈಗಾರಿಕೆಯ ಚಟುವಟಿಕೆಗಳು ಸೇರಿದಂತೆ ರೇಷ್ಮೆ ಕೃಷಿಯು ಹೆಚ್ಚು ಕಡಿಮೆ ಕೃಷಿ ಹಾಗೂ ತೋಟಗಾರಿಕೆ ಚಟುವಟಿಕೆಗಳಿಗೆ ತತ್ಸಮಾನವಾಗಿರುತ್ತದೆ. ತೋಟಗಾರಿಕೆ ಕ್ಷೇತ್ರಕ್ಕೆ ಸಿಕ್ಕಿರುವಂತಹ ಪ್ರಾಶಸ್ತ್ಯವು ರೇಷ್ಮೆ ಕೃಷಿಗೆ ದೊರಕುವುದರಿಂದ ರೇಷ್ಮೆ ಅಭಿವೃದ್ಧಯಲ್ಲಿ ಹೆಚ್ಚಿನ ಪ್ರಗತಿ ಸಾಧಿಸಲು ಸಾಧ್ಯವಾಗುವುದು. ಆದ್ದರಿಂದ ವಾಣಿಜ್ಯ ಮತ್ತು ಕೈಗಾರಿಕಾ ಇಲಾಖೆಯಡಿಯಲ್ಲಿ ಈವರೆವಿಗೆ ನಿರ್ವಹಿಸುತ್ತಿರುವ "ರೇಷ್ಮೆ ಕೃಷಿ" ವಿಷಯವನ್ನು ತೋಟಗಾರಿಕೆ ಇಲಾಖೆಗೆ ವರ್ಗಾವಣೆ ಮಾಡಲು ತೀರ್ಮಾನಿಸಿ ಸರ್ಕಾರವು ಈ ಮುಂದಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಡಿಸಿಎ 3 ಎಆರ್‌ಬಿ 2011, ಬೆಂಗಳೂರು, ದಿನಾಂಕ 24ನೇ ಮೇ 2011**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳ ಹಿನ್ನೆಲೆಯಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದ ವಾಣಿಜ್ಯ ಮತ್ತು ಕೈಗಾರಿಕಾ ಇಲಾಖೆಯಲ್ಲಿ ನಿರ್ವಹಿಸಲ್ಪಡುತ್ತಿರುವ "ರೇಷ್ಮೆ ಕೃಷಿ" ಗೆ ಸಂಬಂಧಪಟ್ಟ ವಿಷಯವನ್ನು ತಕ್ಷಣದಿಂದ ಜಾರಿಗೆ ಬರುವಂತೆ ತೋಟಗಾರಿಕೆ ಇಲಾಖೆಗೆ ವರ್ಗಾಯಿಸಿದೆ.

ಈ ಬಗ್ಗೆ ಕರ್ನಾಟಕ ಸರ್ಕಾರದ (ಕೆಲಸಗಳ ಹಂಚಿಕೆ) ನಿಯಮಗಳು 1977ಕ್ಕೆ ಸೂಕ್ತವಾದ ತಿದ್ದುಪಡಿಯನ್ನು ಪ್ರತ್ಯೇಕವಾಗಿ ಹೊರಡಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪಿ. ಮಾರ್ಕಂಡೇಯ,**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್. 1400 ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ.

(ಸೇವಾ ನಿಯಮಗಳು-2)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಸಿಆಸು ಇಲಾಖೆಯ ಪ್ರಧಾನ ಕಾರ್ಯದರ್ಶಿಯವರ ಆಪ್ತ ಶಾಖೆಯಲ್ಲಿ ಮತ್ತೊಂದು ಕಿರಿಯ ಸಹಾಯಕ ಹುದ್ದೆಯನ್ನು ಸೃಜಿಸುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರದ ಕಾರ್ಯದರ್ಶಿ, ಸಿಆಸು ಇಲಾಖೆ ಇವರ ಟಿಪ್ಪಣಿ ಸಂಖ್ಯೆ : ಸಿಆಸುಇ 81 ಕಾ 2011, ದಿನಾಂಕ 13-04-2011.

**ಪ್ರಸ್ತಾವನೆ :**

ಸರ್ಕಾರದ ಕಾರ್ಯದರ್ಶಿ, ಸಿಆಸು ಇಲಾಖೆ ಇವರು ಮೇಲೆ ಓದಲಾದ ಟಿಪ್ಪಣಿಯಲ್ಲಿ ತಮ್ಮ ಆಪ್ತ ಶಾಖೆಯಲ್ಲಿ ಪ್ರತಿ ದಿನ ಅಂದಾಜು 125-150 ಕಡತಗಳು ಹಾಗೂ 100 ಕ್ಕೂ ಅಧಿಕ ಪತ್ರಗಳು ಸ್ವೀಕೃತವಾಗುತ್ತಿದ್ದು ಮಂಜೂರಾಗಿರುವ ಒಂದೇ ಒಂದು ಕಿರಿಯ ಸಹಾಯಕರಿಂದ ಈ ಎಲ್ಲ ಪತ್ರಗಳು ಹಾಗೂ ಕಡತಗಳ ಚಲನವಲನವನ್ನು ಗಣಕಯಂತ್ರದಲ್ಲಿ ನಿರ್ವಹಣೆ ಮಾಡುವುದು ಕಷ್ಟಕರವಾಗಿದೆಯೆಂದು ವಿವರಿಸಿ, ಆಪ್ತಶಾಖೆಗೆ ಮತ್ತೊಂದು ಕಿರಿಯ ಸಹಾಯಕರ ಹುದ್ದೆಯನ್ನು ಸೃಜಿಸುವಂತೆ ಸಕಾರಣಗಳೊಂದಿಗೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 93 ಆಕಿಸೇ 2011, ಬೆಂಗಳೂರು, ದಿನಾಂಕ 30ನೇ ಮೇ 2011**

ಕರ್ನಾಟಕ ಸರ್ಕಾರ ಸಚಿವಾಲಯದ ಸಿಆಸು ಇಲಾಖೆಯಲ್ಲಿನ ಪ್ರಧಾನ ಕಾರ್ಯದರ್ಶಿಯವರ ಆಪ್ತ ಶಾಖೆಯಲ್ಲಿ ಹಾಲಿ ಇರುವ ಒಂದು ಕಿರಿಯ ಸಹಾಯಕರ ಹುದ್ದೆಗೆ ಪೂರಕವಾಗಿ **ಮತ್ತೊಂದು ಕಿರಿಯ ಸಹಾಯಕರ ಹುದ್ದೆಯನ್ನು ಈ ಆದೇಶ ಹೊರಡಿಸಿದ ದಿನಾಂಕದಿಂದ ಒಂದು ವರ್ಷದ ಕಾಲಾವಧಿಗೆ ತಾತ್ಕಾಲಿಕವಾಗಿ ಸೃಜಿಸಲು ಮಂಜೂರಾತಿಯನ್ನು ನೀಡಲಾಗಿದೆ.**

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ 436 ವೆಚ್ಚ–12/ 2011, ದಿನಾಂಕ 17–05–2011 ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಪಿ. ಆನಂದಕುಮಾರ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ.
(ಆಡಳಿತ–2)

ಪಿ.ಆರ್. 1401

## ಸಹಕಾರ ಸಚಿವಾಲಯ

**ವಿಷಯ :** ರಾಜ್ಯದ ರೈತರಿಗೆ ಕೃಷಿ ಪತ್ತಿನ ಸಹಕಾರ ಸಂಸ್ಥೆಗಳು ಶೇ.3ರ ಬಡ್ಡಿ ದರದಲ್ಲಿ ನೀಡಿದ ಸಾಲಗಳ ಪೈಕಿ ವಸೂಲಾಗಿರುವ ಸಾಲಗಳ ಬಡ್ಡಿಯ ವ್ಯತ್ಯಾಸದ ಸಹಾಯಧನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರಿ ಆದೇಶ ಸಂಖ್ಯೆ : ಸಿಓ 96 ಸಿಎಲ್ಎಸ್ 2011, ದಿನಾಂಕ 21–03–2011 ಮತ್ತು 26–03–2011.

2. ಸಹಕಾರ ಸಂಘಗಳ ನಿಬಂಧಕರ ಪತ್ರ ಸಂಖ್ಯೆ : ಸಿಆರ್‌ಡಿ/4/ಕೆಆರ್‌ಎಫ್/2008–09, ದಿನಾಂಕ 25–04–2011.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಆದೇಶಗಳಲ್ಲಿ ಸಹಕಾರಿ ಸಂಸ್ಥೆಗಳು ರೈತರಿಗೆ ನೀಡಿದ ಸಾಲಗಳ ಪೈಕಿ ವಸೂಲಾದ ಸಾಲಗಳ ಮೇಲೆ ಬಡ್ಡಿ ಸಹಾಯಧನ ದಿನಾಂಕ 31–03–2011ರ ಅಂತ್ಯದವರೆಗೆ ರೂ. 140.56 ಕೋಟಿಗಳನ್ನು ಬಿಡುಗಡೆ ಮಾಡಲಾಗಿದೆ. ಈ ಯೋಜನೆ ಅಡಿಯಲ್ಲಿ ದಿನಾಂಕ 23–04–2011 ರವರೆಗೆ ಅಲ್ಪಾವಧಿ/ಮಾಧ್ಯಮಾವಧಿ ಸಾಲ ಸಾಮಾನ್ಯ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದ ಬಿಲ್ಲುಗಳ ಮೊತ್ತ ರೂ. 12216.04 ಲಕ್ಷಗಳು, ದೀರ್ಘಾವಧಿ ಸಾಲ ರೂ. 1951.50 ಲಕ್ಷಗಳು, ಮೀನುಗಾರಿಕೆ ಸಾಲ ರೂ. 5.48 ಲಕ್ಷ ಹೀಗೆ ಒಟ್ಟು ರೂ. 14173.02 ಲಕ್ಷಗಳ ಬಿಲ್ಲುಗಳು ಬಾಕಿ ಇದ್ದು 2011–12ನೇ ಸಾಲಿಗೆ ಕೃಷಿ ಸಾಲಗಳ ಮೇಲಿನ ಬಡ್ಡಿ ಸಹಾಯಧನ ಯೋಜನೆಗೆ ರೂ.300.00 ಕೋಟಿಗಳ ಅವಕಾಶ ಕಲ್ಪಿಸಿದ್ದು ಈ ಪೈಕಿ ರೂ. 14173.02 ಲಕ್ಷಗಳನ್ನು ಬಿಡುಗಡೆ ಮಾಡುವಂತೆ ಮೇಲೆ ಓದಲಾದ (2)ರ ಪತ್ರದಲ್ಲಿ ಸಹಕಾರ ಸಂಘಗಳ ನಿಬಂಧಕರು ಕೋರಿರುತ್ತಾರೆ. ಸದರಿ ಕೋರಿಕೆಯನ್ನು ಪರಿಗಣಿಸಿ ರೂ.75.00 ಕೋಟಿಗಳನ್ನು ಬಿಡುಗಡೆ ಮಾಡಲು ತೀರ್ಮಾನಿಸಲಾಗಿರುತ್ತದೆ.

ಆದುದರಿಂದ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಓ 96 ಸಿಎಲ್ಎಸ್ 2011, ಬೆಂಗಳೂರು, ದಿನಾಂಕ 11ನೇ ಮೇ 2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸಹಕಾರಿ ಸಂಸ್ಥೆಗಳು ರೈತರಿಗೆ ನೀಡಿದ ಸಾಲಗಳ ಪೈಕಿ ವಸೂಲಾದ ಸಾಲಗಳ ಮೇಲಿನ ಬಡ್ಡಿ ಸಹಾಯಧನದ ಕ್ಲೇಮುಗಳ ಬಾಬ್ತು ರೂ.7500.00 ಲಕ್ಷಗಳನ್ನು (ರೂಪಾಯಿ ಏಳು ಸಾವಿರದ ಐದುನೂರು ಲಕ್ಷಗಳು ಮಾತ್ರ) ಬಿಡುಗಡೆ ಮಾಡಲು ಮಂಜೂರಾತಿ ನೀಡಲಾಗಿದೆ.

ಈ ವೆಚ್ಚವನ್ನು 2011–12ನೇ ಆಯವ್ಯಯದ ಲೆಕ್ಕಶೀರ್ಷಿಕೆ **"2425–00–107–2–41–ಬೆಳೆ ಸಾಲಕ್ಕಾಗಿ ಬಡ್ಡಿ ಸಹಾಯಧನ (ಯೋಜನೆ)"** ಅಡಿ ಭರಿಸತಕ್ಕದ್ದು.

| | |
|---|---|
| 2425–00–107–2–41– ಬೆಳೆ ಸಾಲಕ್ಕಾಗಿ ಬಡ್ಡಿ ಸಹಾಯಧನ–106– ಸಹಾಯಧನ | ರೂ. 7450.19 ಲಕ್ಷಗಳು |
| 2425–00–107–2–41– ಬೆಳೆ ಸಾಲಕ್ಕಾಗಿ ಬಡ್ಡಿ ಸಹಾಯಧನ–422– ವಿಶೇಷ ಘಟಕ ಯೋಜನೆ | ರೂ. 27.26 ಲಕ್ಷಗಳು |
| 2425–00–107–2–41– ಬೆಳೆ ಸಾಲಕ್ಕಾಗಿ ಬಡ್ಡಿ ಸಹಾಯಧನ–423– ಗಿರಿಜನ ಉಪ ಯೋಜನೆ | ರೂ. 22.55 ಲಕ್ಷಗಳು |

ಸದರಿ ಮೊಬಲಗನ್ನು ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಬಿಡುಗಡೆ ಮಾಡಲಾಗಿದೆ.

1) ಬಡ್ಡಿಯ ಸಹಾಯಧನದ ಎಲ್ಲ ಕ್ಲೇಮುಗಳು ಅಸಲಿನ ಪೂರ್ಣ ಮರುಪಾವತಿಗೆ ಸಂಬಂಧಪಟ್ಟಿದ್ದು, ಸಾಲ ಮರುಪಾವತಿ ದಿನಾಂಕ ಅಥವಾ ಸಾಲ ಮರುಪಾವತಿ ಗಡುವು ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಮಾತ್ರ ಇರುತ್ತವೆ ಎಂದು ಖಾತ್ರಿಪಡಿಸಿಕೊಳ್ಳತಕ್ಕದ್ದು.

2) ಕ್ಲೇಮುಗಳು ಸರ್ಕಾರಿ ಆದೇಶ ಸಂಖ್ಯೆ : ಸಿಓ 66 ಸಿಎಲ್ಎಸ್ 2009, ದಿನಾಂಕ 20–08–2009ರ ಪ್ರಕಾರ ಇರುತ್ತವೆಂದು ಖಾತ್ರಿಪಡಿಸಿಕೊಳ್ಳತಕ್ಕದ್ದು.

ಈ ಹಣವನ್ನು ಸಹಕಾರ ಸಂಘಗಳ ಜಂಟಿ ನಿಬಂಧಕರು (ಪತ್ತು), ಸಹಕಾರ ಸಂಘಗಳ ನಿಬಂಧಕರ ಕಛೇರಿ, ಬೆಂಗಳೂರು ಇವರು ಹಣ ಸಂದಾಯ ರಸೀದಿ ಮೂಲಕ ಸಹಕಾರ ಸಂಘಗಳ ನಿಬಂಧಕರ ಮೇಲು ಸಹಿ ಪಡೆದು ಖಜಾನೆಯಿಂದ ಪಡೆಯತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : ಎಫ್‌ಡಿ/190/ವೆಚ್ಚ – 2/2011, ದಿನಾಂಕ 04–05–2011 ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆರ್.ಎಸ್. ನೂಲಿ,**
ವಿಶೇಷ ಕರ್ತವ್ಯಾಧಿಕಾರಿ ಹಾಗೂ
ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ, ಸಹಕಾರ ಇಲಾಖೆ.

ಪಿ.ಆರ್. 1402

## INFRASTRUCTURE DEVELOPMENT SECRETARIAT

**Sub:** Sharing of cost of Tumkur-Rayadurga New Railway line.

**Read:** 1. G.O. No. IDD 82 NSW 09 dated 9-12-2010.

2. Letter No : W.63/CN/BNC/MR/B/GL dated 31-03-2011 of Chief Engineer, (Con)/East/ SWR, Bangalore.

**Preamble:**

1. In the Government Order dated 09-12-2010 read at (1) above, the State Government has accorded sanction for taking up new BG line between Tumkur-Rayadurga via Kalyandurga (207.65 Kms centre to centre of stations). Total cost of the project is estimated to be Rs. 1027.89 cr; & the share of the GOK is Rs. 479.59 crores in Karnataka. The length of the project in Karnataka is 102.63 Kms. Considering the importance of the project the state Government has decided to take up this railway project on 50:50 cost sharing basis (excluding land acquisition cost) between Railways and Government of Karnataka; within a period of 3-4 years.

2. The Chief Engineer, South Western Railway, Bangalore in his letter read at Sl. No. (2) above, has requested that an amount of Rs. 20.00 crores may be released immediately for Tumkur-Rayadurga via Kalyandurga new railway line project.

3. The proposal of Railways has been examined and it has been decided to release an amount of Rs. 20.00 crore out of the Budget of Rs. 256.52 crores provided under the Head of Account "5465-01-190-3-05-211 New cost sharing project – Investment during 2011-12.

Hence this Order :-

**GOVERNMENT ORDER NO.: IDD 82 NSW 2009, BANGALORE, DATED: 23-05-2011**

In the circumstances mentioned above, Government of Karnataka is pleased to release an amount of Rs. 20.00 crores (Rupees Twenty Crore only) towards the share of the State Government towards construction of Tumkur-Rayadurga new railway line project.

2. The expenditure shall be met under the Head of Account 5465-01-190-3-05-(P)-211-Investment- Cost sharing for new projects out of the budgeted amount for the year 2011-12.

3. Railway department should furnish the amount expended to the project and work completed or the utilization statement before seeking the next release.

4. The Chief Executive Officer, K-RIDE is authorized to draw the amount on a payee's receipt duly countersigned by the Under Secretary to Government, Infrastructure Development Department and K-RIDE shall in turn deposit the same with the Financial Advisor and Chief Accounts Officer (Construction), South Western Railway, Bangalore.

5. This order is issued with the concurrence of Finance Department vide U.O. Note No. FD 840 Exp-I/2011, dated 18-05-2011.

By Order and in the name of the Governor of Karnataka,

**C.A. BABURAVINDRANATH PATEL,**

Under Secretary to Government,

Infrastructure Development Department.

PR No. 1403

## ನಗರಾಭಿವೃದ್ಧಿ ಸಚಿವಾಲಯ

**ವಿಷಯ :** ಬಳ್ಳಾರಿ ಜಿಲ್ಲೆ, ವಿಜಯನಗರ ಪಟ್ಟಣದ ಸ್ಥಳೀಯ ಯೋಜನಾ ಪ್ರದೇಶಕ್ಕೆ ತಯಾರಿಸಲಾದ ಮಧ್ಯಂತರ ಮಹಾ ಯೋಜನೆಗೆ ಸರ್ಕಾರದ ಅನುಮೋದನೆಯನ್ನು ನೀಡುವ ಕುರಿತು.

**ಓದಲಾಗಿದೆ :** 1. ಸರ್ಕಾರದ ಆದೇಶ ಸಂಖ್ಯೆ: ನಅಇ 196 ಬೆಮಪ್ರಾ 2008, ದಿನಾಂಕ 15–12–2008

2. ವಿಜಯನಗರ ಪ್ರದೇಶಾಭಿವೃದ್ಧಿ ಪ್ರಾಧಿಕಾರದ ಪತ್ರ ಸಂಖ್ಯೆ: ವಾಡಾ/ತಾಂತ್ರಿಕ/ಮ.ಮ.ಯೋ(01)/ 2010–11/260, ದಿನಾಂಕ 18–2–2011.

3. ನಗರ ಯೋಜನಾ ನಿರ್ದೇಶಕರು, ಬೆಂಗಳೂರು ರವರ ಏಕ ಕಡತ ಸಂಖ್ಯೆ: ನಗ್ರಾಯೋ/ಉನಿ (ಯೋವಿ)/ವಾಡಾ/ಮ.ಯೋ/(ಪ–1):ಅಂತಿಮ/2010–11. ದಿನಾಂಕ 30–03–2011 ರಲ್ಲಿ ನೀಡಿರುವ ಅಭಿಪ್ರಾಯ.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮಾಂಕ (1)ರ ಸರ್ಕಾರದ ಆದೇಶದಲ್ಲಿ, ಬಳ್ಳಾರಿ ಜಿಲ್ಲೆ, ವಿಜಯನಗರ ಪಟ್ಟಣದ ಸ್ಥಳೀಯ ಯೋಜನಾ ಪ್ರದೇಶವನ್ನು ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರ ಕಲಂ–4–ಎ ರನ್ವಯ ತಾತ್ವಿಕವಾಗಿ ಘೋಷಿಸಿ ಆದೇಶಿಸಿದೆ.

ಮೇಲೆ ಓದಲಾದ ಕ್ರಮಾಂಕ (2)ರ ಪತ್ರದಲ್ಲಿ ವಿಜಯನಗರ ಪ್ರದೇಶಾಭಿವೃದ್ಧಿ ಪ್ರಾಧಿಕಾರವು ವಿಜಯನಗರ ಸ್ಥಳೀಯ ಯೋಜನಾ ಪ್ರದೇಶದ ಮಧ್ಯಂತರ ಮಹಾ ಯೋಜನೆಯನ್ನು ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರ ಕಲಂ 13(1)ರನ್ವಯ ತಯಾರಿಸಿ ದಿನಾಂಕ 14–02–2011 ರಂದು ನಡೆದ ಪ್ರಾಧಿಕಾರದ ಸಭೆಯಲ್ಲಿ ಮಂಡಿಸಿ, ಮಧ್ಯಂತರ ಮಹಾ ಯೋಜನೆಯನ್ನು ನಗರ ಮತ್ತು ಗ್ರಾಮಾಂತರ ಯೋಜನಾ ಇಲಾಖೆಯ ನಿರ್ದೇಶಕರ ಮೂಲಕ ಸರ್ಕಾರದ ಅನುಮೋದನೆಗಾಗಿ ಪ್ರಸ್ತಾವನೆಯನ್ನು ಸಲ್ಲಿಸಲು ತೀರ್ಮಾನಿಸಿದಂತೆ ಕ್ರಮ ಕೈಗೊಂಡಿದೆ.

ಮೇಲೆ ಓದಲಾದ ಕ್ರಮಾಂಕ (3)ರ ಏಕ ಕಡತದಲ್ಲಿ ನಗರ ಮತ್ತು ಗ್ರಾಮಾಂತರ ಯೋಜನಾ ನಿರ್ದೇಶಕರು, ವಿಜಯನಗರ ಪಟ್ಟಣದ ಜನಸಂಖ್ಯೆಯು 2031ರಲ್ಲಿ 10,00,000 (ಹತ್ತು ಲಕ್ಷ) ಆಗುವುದಾಗಿ ಅಂದಾಜಿಸಿ ಮಧ್ಯಂತರ ಮಹಾ ಯೋಜನೆಯನ್ನು ರೂಪಿಸಲಾಗಿದೆ. ವಿಜಯನಗರ

ಪಟ್ಟಣದ ಜನಸಂಖ್ಯೆ, ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗತಿ, ಹಾಲಿ ಬೆಳವಣಿಗೆಯ ಗತಿ, ಹವಾಗುಣ, ರಸ್ತೆಗಳ ಹಾಲಿ ಪರಿಚಲನೆ ವ್ಯವಸ್ಥೆಯ ಸಮಸ್ಯೆಗಳನ್ನು ವಿಶ್ಲೇಷಿಸಿ ಯೋಜನಾ ತತ್ವಗಳಿಗೆ ಅನುಗುಣವಾಗಿ ಹಾಗೂ ಮಹಾ ಯೋಜನೆಯ ತಯಾರಿಕೆ ಬಗ್ಗೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರ ಪ್ರಕರಣ (9)ರಿಂದ (12)ರವರೆಗೆ ನಿಗಧಿಪಡಿಸಿರುವ ಅಂಶಗಳನ್ನು ಪರಿಗಣಿಸಿ, ನಗರದ ಯೋಜಿತ ಬೆಳವಣಿಗೆಗಾಗಿ ಪ್ರಸ್ತಾಪಿಸಿರುವ ಒಟ್ಟು 31435.15 ಹೆಕ್ಟೇರ್ ಪ್ರದೇಶವನ್ನು ನಗರೀಕರಣ ಎಲ್ಲೆ ಎಂದು ಪರಿಗಣಿಸಿ ಸದರಿ ಪ್ರದೇಶದಲ್ಲಿ ವಸತಿಗಾಗಿ 5422.53 ಹೆಕ್ಟೇರ್ (ಶೇ. 17.25), ವಾಣಿಜ್ಯಕ್ಕಾಗಿ 670.74 ಹೆಕ್ಟೇರ್ (ಶೇ. 2.13), ಕೈಗಾರಿಕೆಗಾಗಿ 16516.39 ಹೆಕ್ಟೇರ್ (ಶೇ. 52.54) ಸಾರ್ವಜನಿಕ/ಅರೆಸಾರ್ವಜನಿಕ ಉಪಯೋಗಕ್ಕೆ 1609.47 ಹೆಕ್ಟೇರ್ (ಶೇ. 5.12) ಉದ್ಯಾನವನ ಮತ್ತು ಬಯಲು ಜಾಗಗಳಿಗಾಗಿ 3333.03 ಹೆಕ್ಟೇರ್ (ಶೇ. 10.60) ಸಾರಿಗೆ/ಸಂಪರ್ಕ ವಲಯಕ್ಕೆ 3608.01 ಹೆಕ್ಟೇರ್ (ಶೇ. 11.49) ಹಾಗೂ ನಾಗರೀಕ ಸೌಲಭ್ಯಕ್ಕಾಗಿ 274.98 ಹೆಕ್ಟೇರ್ (ಶೇ. 0.87) ಪ್ರದೇಶವನ್ನು ನಿಗದಿಪಡಿಸಲಾಗಿದೆ. ಮಹಾ ಯೋಜನೆಯನ್ನು ಅನುಷ್ಠಾನಕ್ಕೆ ತರಲು ಅಗತ್ಯವಿರುವ ವಲಯ ನಿಯಮಾವಳಿಗಳನ್ನು ರೂಪಿಸಲಾಗಿದೆ. ಆದರೆ ವಿಜಯನಗರ ಸ್ಥಳೀಯ ಯೋಜನಾ ಪ್ರದೇಶದ ವ್ಯಾಪ್ತಿಯಲ್ಲಿ ಕೈಗಾರಿಕಾ ಪ್ರದೇಶ ಹೆಚ್ಚಾಗಿದ್ದು, ಈ ಸಂಬಂಧ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿಯು ಪ್ರಸ್ತಾಪಿಸಿದ ನಿಯಮಾವಳಿಗಳನ್ನು ಪರಿಶೀಲಿಸಿ ಚರ್ಚಿಸಲಾಯಿತು. ನಂತರ ಕೆಲವು ಬದಲಾವಣೆಗಳ ಅವಶ್ಯಕತೆ ಕಂಡು ಬಂದ ಕಾರಣ ಅಂತಿಮವಾಗಿ ಎಫ್.ಎ.ಆರ್. ಕವರೇಜ್ ಮತ್ತು ಸೆಟ್‌ಬ್ಯಾಕ್‌ಗಳನ್ನು ಕೆಳಕಂಡಂತೆ ಅನುಮೋದಿಸಲಾಯಿತು.

| Sl. No. | Size of plot (in Sq M) | Coverage (%) | FAR | Set Back | |
|---|---|---|---|---|---|
| | | | | Front | Rear & Sides |
| 1 | Upto 500 | 75 | 2.0 | 4.5m | 4.5m |
| 2 | Above 500 upto 2000 | 65 | 2.0 | 4.5m | 4.5m |
| 3 | Above 2000 upto 4000 | 50 | 2.0 | 6.0m | 6.0m |
| 4 | Above 4000 upto 10000 | 50 | 1.5 | 10.0m | 8.0m |
| 5 | Above 10000 upto 45000 | 50 | 1.25 | 16% | 12% |
| 6 | Above 45000 | 45 | 1.00 | 16% | 12% |

**Note :** For more than one building on a given site the setbacks around the building shall not be less than 4.5m for heights upto 16m with an increase of setback of 0.25m for every increase of 1m or fraction thereof in height above 16m.

ಅದರಂತೆ ಕೈಗಾರಿಕಾ ಕಟ್ಟಡಗಳಿಗೆ ನಿಯಮಾವಳಿಗಳನ್ನು **"ವಲಯ ನಿಯಮಾವಳಿಗಳು"** ಅಧ್ಯಾಯದಲ್ಲಿನ ಅನುಬಂಧ–2ರಲ್ಲಿನ ಕೋಷ್ಟಕ–6ರ ಬದಲಾಗಿ ಈ ಮೇಲಿನ ಕೋಷ್ಟಕದಂತೆ ಅಳವಡಿಸಿಕೊಳ್ಳುವ ಷರತ್ತನ್ನು ವಿಧಿಸಬಹುದಾಗಿ ಅಭಿಪ್ರಾಯಿಸುತ್ತಾ ಸದರಿ ಮಹಾ ಯೋಜನೆಗೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರ ಕಲಂ 13(ಎ) ರನ್ವಯ ಸರ್ಕಾರದ ಅನುಮೋದನೆ ನೀಡಲು ಶಿಫಾರಸ್ಸು ಮಾಡಿ ನಿರ್ದೇಶಕರು ನಗರ ಮತ್ತು ಗ್ರಾಮಾಂತರ ಯೋಜನಾ ಇಲಾಖೆ ರವರು ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ಸರ್ಕಾರವು ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ನಅಇ 30 ಗುಅಪ್ರಾ 2011, ಬೆಂಗಳೂರು, ದಿನಾಂಕ : 21–04–2011**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ವಿಜಯನಗರ ಪಟ್ಟಣದ ಸ್ಥಳೀಯ ಯೋಜನಾ ಪ್ರದೇಶಕ್ಕೆ ರೂಪಿಸಿರುವ ಮಧ್ಯಂತರ ಮಹಾ ಯೋಜನೆಗೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರ ಕಲಂ 13(1)ರನ್ವಯ ಕೈಗಾರಿಕಾ ಕಟ್ಟಡಗಳಿಗೆ ಸಂಬಂಧಿಸಿದಂತೆ ವಲಯ ನಿಯಮಾವಳಿಗಳು ಅಧ್ಯಾಯದಲ್ಲಿನ ಅನುಬಂಧ–2ರ ಕೋಷ್ಟಕ–6ರ ಬದಲಾಗಿ ಈ ಕೆಳಗಿನ ಕೋಷ್ಟಕದಂತೆ ಅಳವಡಿಸಿಕೊಳ್ಳುವ ಷರತ್ತಿಗೊಳಪಟ್ಟು ಮತ್ತು ಮಹಾ ಯೋಜನೆಗೆ ಸರ್ಕಾರದ ಅಂತಿಮ ಅನುಮೋದನೆ ನೀಡುವವರೆಗೆ ಎಲ್ಲಾ ಭೂ ಪರಿವರ್ತನೆಗಳಿಗೆ ಸರ್ಕಾರದ ಪೂರ್ವಾನುಮತಿ ಪಡೆಯುವ ಷರತ್ತಿಗೊಳಪಟ್ಟು ಅನುಮೋದನೆಯನ್ನು ನೀಡಲಾಗಿದೆ.

**ಕೈಗಾರಿಕಾ ಕಟ್ಟಡಗಳಿಗೆ ಅನುಮತಿ ನೀಡಲು ನಿಯಮಗಳನ್ನು ರೂಪಿಸುವ ಬಗ್ಗೆ**

| Sl. No. | Size of plot (in Sq M) | Coverage (%) | FAR | Set Back | |
|---|---|---|---|---|---|
| | | | | Front | Rear & Sides |
| 1 | Upto 500 | 75 | 2.0 | 4.5m | 4.5m |
| 2 | Above 500 upto 2000 | 65 | 2.0 | 4.5m | 4.5m |
| 3 | Above 2000 upto 4000 | 50 | 2.0 | 6.0m | 6.0m |
| 4 | Above 4000 upto 10000 | 50 | 1.5 | 10.0m | 8.0m |
| 5 | Above 10000 upto 45000 | 50 | 1.25 | 16% | 12% |
| 6 | Above 45000 | 45 | 1.00 | 16% | 12% |

**Note :** For more than one building on a given site the setbacks around the building shall not be less than 4.5m for heights upto 16m with an increase of setback of 0.25m for every increase of 1m or fraction thereof in height above 16m.

ಮಧ್ಯಂತರ ಮಹಾಯೋಜನೆ ಅನುಮೋದನೆ ನೀಡಿದ ಗುರುತಾಗಿ ವರದಿ ಮತ್ತು ನಕ್ಷೆಗಳ ಮೇಲೆ ಸರ್ಕಾರದ ಮುದ್ರೆಯನ್ನು ಹಾಕಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಬಸವರಾಜ್ ಬರದೇಲಿ**

ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ),

ನಗರಾಭಿವೃದ್ಧಿ ಇಲಾಖೆ

ಪಿ.ಆರ್. 1169

**ಆರ್ಥಿಕ ಸಚಿವಾಲಯ**

**ವಿಷಯ :** ಮದ್ಯಸಾರ, ಭಾರತೀಯ ಮದ್ಯ ಫೆನ್ನಿ, ಉತ್ಪಾದನಾ ಡಿಸ್ಟಿಲರಿಗಳು, ಬ್ರಿವರಿಗಳು ಮತ್ತು ವೈನರಿಗಳಿಗೆ ಸಂಬಂಧಿಸಿದಂತೆ ಉತ್ಪನ್ನಗಳ ಇಳುವರಿ ನಷ್ಟದ ಪ್ರಮಾಣವನ್ನು ನಿಗಧಿಪಡಿಸಲು ಹಾಗೂ ಇತರೆ ತಾಂತ್ರಿಕ ಅಂಶಗಳ ಬಗ್ಗೆ ಸಲಹೆ ನೀಡಲು ಸ್ಥಾಯಿ ತಾಂತ್ರಿಕ ಸಮಿತಿ ರಚನೆ ಬಗ್ಗೆ.

**ಓದಲಾಗಿದೆ :** ಅಬಕಾರಿ ಆಯುಕ್ತರ ಪತ್ರ ಸಂಖ್ಯೆ: ಇಸಿಡಿ/81/ಆರ್ಇವಿ/2000, ದಿನಾಂಕ 23–03–2011.

**ಪ್ರಸ್ತಾವನೆ :**

ಡಿಸ್ಟಿಲರಿಗಳಲ್ಲಿ ಉತ್ಪಾದಿಸುವ ಮದ್ಯಸಾರ, ಮದ್ಯ ಫೆನ್ನಿ ಇತ್ಯಾದಿ ಉತ್ಪನ್ನಗಳ ಇಳುವರಿ, ಉತ್ಪಾದನಾ ನಷ್ಟ ಇವುಗಳನ್ನು ನಿಗಧಿಪಡಿಸುವ ನಿಟ್ಟಿನಲ್ಲಿ ಈ ಹಿಂದೆ ತಾಂತ್ರಿಕ ಸಮಿತಿಯನ್ನು ರಚಿಸಲಾಗಿತ್ತು. ಸದರಿ ಸಮಿತಿಯ ಅವಧಿ ಮುಗಿದಿದ್ದು, ನಂತರದ ಅವಧಿಯಲ್ಲಿ ಇಲಾಖೆಯು ಹಲವಾರು ಹೊಸ ಸಮಸ್ಯೆಗಳನ್ನು ಎದುರಿಸುತ್ತಿರುವುದರಿಂದ ಈ ಕೆಳಕಂಡ ಅಂಶಗಳ ಬಗ್ಗೆ ತಾಂತ್ರಿಕ ಸಮಿತಿಯ ಸಲಹೆಯ ಅಗತ್ಯವಿರುವುದರಿಂದ ಒಂದು ತಾಂತ್ರಿಕ ಉಪ ಸಮಿತಿಯನ್ನು ರಚಿಸುವಂತೆ ಅಬಕಾರಿ ಆಯುಕ್ತರು ಮೇಲೆ ಓದಲಾದ ದಿನಾಂಕ 23–03–2011ರ ಪತ್ರದಲ್ಲಿ ಸರ್ಕಾರಕ್ಕೆ ಪ್ರಸ್ತಾವನೆ ಕಳುಹಿಸಿರುವರು:–

1. 36 ತಿಂಗಳಿಗೂ ಮೇಲ್ಪಟ್ಟ ಅವಧಿಗೆ ಮರದ ಪೀಪಾಯಿಗಳಲ್ಲಿ ಮದ್ಯಸಾರವನ್ನು ಪರಿಪಕ್ವಗೊಳಿಸುವಲ್ಲಿ ಆಗಬಹುದಾದ ನಷ್ಟದ ಪ್ರಮಾಣವನ್ನು ನಿಗಧಿಪಡಿಸುವುದು.
2. ಶುಗರ್ ಬೀಟ್, ಬೆಲ್ಲ ಇತ್ಯಾದಿಯಿಂದ ನೇರವಾಗಿ ಮದ್ಯಸಾರ ತಯಾರಿಸಲು ಅನುಮತಿ ನೀಡಿದಲ್ಲಿ ಅಂತಹ ಮದ್ಯಸಾರದ ಇಳುವರಿ ಹಾಗೂ ನಿಗಧಿಪಡಿಸಬಹುದಾದ ಗರಿಷ್ಠ ಪ್ರಮಾಣದ ನಷ್ಟದ ಮಿತಿ ಇತ್ಯಾದಿ.
3. ಪ್ರಾಥಮಿಕ ಡಿಸ್ಟಿಲರಿಗಳಲ್ಲಿ ಕಾಕಂಬಿಯಿಂದ ತಯಾರಾದ ಮದ್ಯಸಾರದ ನಷ್ಟ ಹಾಗೂ ಇಳುವರಿಯನ್ನು ಪರಿಷ್ಕರಿಸುವುದು.
4. ಮದ್ಯಸಾರದ ಉತ್ಪಾದನೆಯಲ್ಲಿ ಅಳವಡಿಸುವ ತಾಂತ್ರಿಕತೆ (Continuous and Batch Process) ಇತ್ಯಾದಿ
5. ಯಾಂತ್ರಿಕವಾಗಿ ಭದ್ರತಾ ಚೀಟಿ ಅಂಟಿಸುವುದು

ಈ ಪ್ರಸ್ತಾವನೆಯನ್ನು ಪರಿಶೀಲಿಸಿದ ನಂತರ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ

**ಸರ್ಕಾರದ ಆದೇಶ ಸಂಖ್ಯೆ : ಆಇ 28 ಇಎಎ 2011, ಬೆಂಗಳೂರು, ದಿನಾಂಕ : 15–04–2011**

ಅಬಕಾರಿ ಆಯುಕ್ತರ ಪ್ರಸ್ತಾವನೆಯನ್ನು ಪರಿಶೀಲಿಸಿ, ಪ್ರಸ್ತಾವನೆಯಲ್ಲಿ ತಿಳಿಸಿದ ಅಂಶಗಳ ಬಗ್ಗೆ ಸಲಹೆ ನೀಡಲು ಈ ಕೆಳಕಂಡ ಸದಸ್ಯರುಗಳನ್ನೊಳಗೊಂಡ ಸ್ಥಾಯಿ ತಾಂತ್ರಿಕ ಸಮಿತಿಯನ್ನು ರಚಿಸಿದೆ:

| | | | |
|---|---|---|---|
| 1. | ಅಬಕಾರಿ ಆಯುಕ್ತರು | ... | ಅಧ್ಯಕ್ಷರು |
| 2. | ಅಬಕಾರಿ ಜಂಟಿ ಆಯುಕ್ತರು (ಡಿಸ್ಟಿಲರಿ ಅಂಡ್ ಬ್ರಿವರಿ) | ... | ಸದಸ್ಯರು, ಕಾರ್ಯದರ್ಶಿ |
| 3. | ಕೈಗಾರಿಕಾ ಮತ್ತು ವಾಣಿಜ್ಯ ಇಲಾಖೆ ಅಥವಾ ಟೆಕ್‌ಸಾಕ್ (TEKSOK)ನ ಒಬ್ಬ ತಾಂತ್ರಿಕ ಅಧಿಕಾರಿ | ... | ಸದಸ್ಯರು |
| 4. | ಪ್ರಾಧ್ಯಾಪಕರು, ರಾಸಾಯನಿಕ ಇಂಜಿನಿಯರಿಂಗ್ ವಿಭಾಗ Indian Institute of Science, ಬೆಂಗಳೂರು | ... | ಸದಸ್ಯರು |
| 5. | ಪ್ರೊಫೆಸರ್ ಆಫ್ ಕೆಮಿಕಲ್ ಇಂಜಿನಿಯರಿಂಗ್, ಸೂರತ್ಕಲ್, ಮಂಗಳೂರು | ... | ಸದಸ್ಯರು |
| 6. | ಕೆ.ಎಸ್.ಬಿ.ಸಿ.ಎಲ್ ನ ಒಬ್ಬ ಅಧಿಕಾರಿ, ಬೆಂಗಳೂರು | ... | ಸದಸ್ಯರು |
| 7. | ಡಿಸ್ಟಿಲರ್ಸ್ ಅಸೋಸಿಯೇಷನ್ ಒಬ್ಬ ಸದಸ್ಯರು, ಬೆಂಗಳೂರು | ... | ಸದಸ್ಯರು |
| 8. | ಮಾರ್ಕೆಟಿಂಗ್ ಕನ್ಸಲ್ಟೆಂಟ್ಸ್ ಅಂಡ್ ಏಜೆನ್ಸೀಸ್ ಲಿ.,ನ ಒಬ್ಬ ಅಧಿಕಾರಿ ಬೆಂಗಳೂರು | ... | ಸದಸ್ಯರು |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಸ್. ಜಿ. ನಾರಾಯಣ**
ಸರ್ಕಾರದ ಅಧೀನ ಕಾರ್ಯದರ್ಶಿ
ಆರ್ಥಿಕ ಇಲಾಖೆ (ಅಬಕಾರಿ)

ಪಿ.ಆರ್. 1170

**ಆರ್ಥಿಕ ಸಚಿವಾಲಯ**

**ವಿಷಯ :** ಕರ್ನಾಟಕ ಭವನದಲ್ಲಿ ಕಾರ್ಯನಿರ್ವಹಿಸುತ್ತಿರುವ ನೌಕರರುಗಳಿಗೆ ಸಮವಸ್ತ್ರ ಭತ್ಯೆ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ :** ಸರ್ಕಾರಿ ಅದೇಶ ಸಂಖ್ಯೆ: ಆಇ 31 ಎಸ್ಆರ್‌ಪಿ 2007 (XI) ದಿನಾಂಕ 14–08–2008

**ಪ್ರಸ್ತಾವನೆ :**

ಮೇಲೆ ಓದಲಾದ ದಿನಾಂಕ 14–08–2008ರ ಸರ್ಕಾರಿ ಆದೇಶದಲ್ಲಿ 5ನೇ ವೇತನ ಆಯೋಗದ ಶಿಫಾರಸ್ಸಿನಂತೆ ಕೆಲವೊಂದು ವರ್ಗದ ಹುದ್ದೆಗಳಿಗೆ ನೀಡುತ್ತಿದ್ದ ಸಮವಸ್ತ್ರ ಭತ್ಯೆಯ ದರಗಳನ್ನು ಪರಿಷ್ಕರಿಸಲಾಗಿತ್ತು. ಈಗ ಕರ್ನಾಟಕ ಭವನದ ನಿವಾಸಿ ಆಯುಕ್ತರು ಕರ್ನಾಟಕ ಭವನ, ನವದೆಹಲಿಯು ಗಣ್ಯ ಮತ್ತು ಅತಿ ಗಣ್ಯ ವ್ಯಕ್ತಿಗಳಿಗೆ ಆತಿಥ್ಯ ನೀಡುವ ಕಚೇರಿಯಾಗಿದ್ದು, ಇಂತಹ ಶಿಷ್ಟಾಚಾರ ಕಾರ್ಯ ನಿರ್ವಹಿಸುವ ನೌಕರರು ಸಮವಸ್ತ್ರ ಧರಿಸುವುದು ಸೂಕ್ತವಾಗಿರುವುದರಿಂದ ಅವರಿಗೆ ಸಮವಸ್ತ್ರ ಭತ್ಯೆಯನ್ನು ನೀಡಬೇಕೆಂದು ಕೋರಿದ್ದಾರೆ. ಈ ಪ್ರಸ್ತಾವನೆಯನ್ನು ಪರಿಶೀಲಿಸಿ ದಿನಾಂಕ 14–8–2008ರ ಸರ್ಕಾರಿ ಆದೇಶವನ್ನು ಮುಂದುವರಿಸುತ್ತಾ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಆಇ 26 ಎಸ್‌ಆರ್‌ಪಿ 2011, ಬೆಂಗಳೂರು, ದಿನಾಂಕ 21-04-2011**

ನವದೆಹಲಿಯ ಕರ್ನಾಟಕ ಭವನದ ಈ ಕೆಳಕಂಡ ನೌಕರರಿಗೆ ಅವುಗಳ ಮುಂದೆ ತೋರಿಸಿದ ದರಗಲ್ಲಿ ಸಮವಸ್ತ್ರ ಭತ್ಯೆಯನ್ನು ತತ್‌ಕ್ಷಣದಿಂದ ಜಾರಿಗೆ ಬರುವಂತೆ ಮಂಜೂರು ಮಾಡಲು ಸರ್ಕಾರವು ಹರ್ಷಿಸುತ್ತದೆ.

(1) 'ಸಿ' ಗುಂಪಿನ ನೌಕರರು – ಪ್ರತಿ ಎರಡು ವರ್ಷಗಳಿಗೊಮ್ಮೆ ರೂ. 5,000/– (ಪ್ರತಿಯೊಬ್ಬರಿಗೆ)

(2) 'ಡಿ' ಗುಂಪಿನ ನೌಕರರು – ವಾರ್ಷಿಕ ರೂ. 2,000/– (ಪ್ರತಿಯೊಬ್ಬರಿಗೆ)

2. ಈ ನೌಕರರು ಧರಿಸಬೇಕಾದ ಸಮವಸ್ತ್ರ ನಮೂನೆಯನ್ನು ನಿವಾಸಿ ಆಯುಕ್ತರು ಪ್ರತ್ಯೇಕವಾಗಿ ನಿಗಧಿಪಡಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಸುಂದರ ರಾಜ ಗುಪ್ತ**
ಸರ್ಕಾರದ ಉಪ ಕಾರ್ಯದರ್ಶಿ
ಆರ್ಥಿಕ ಇಲಾಖೆ (ಸೇವೆಗಳು–2)

ಪಿ.ಆರ್. 1171

## ಆರ್ಥಿಕ ಸಚಿವಾಲಯ

**ವಿಷಯ :** ಕೆಲವೊಂದು ವರ್ಗದ ಹುದ್ದೆಗಳಿಗೆ ಹೆಚ್ಚಿನ ವೇತನ ಶ್ರೇಣಿಗಳನ್ನು ನೀಡುವ ಕುರಿತು 5ನೇ ರಾಜ್ಯ ವೇತನ ಆಯೋಗವು ಮಾಡಿರುವ ಶಿಫಾರಸ್ಸುಗಳನ್ನು ಅನುಷ್ಠಾನಗೊಳಿಸುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 8 ಎಸ್‌ಆರ್‌ಪಿ 07, ದಿನಾಂಕ 16-5-2007

2. ಸರ್ಕಾರಿ ಅಧಿಸೂಚನೆ ಸಂಖ್ಯೆ: ಎಫ್‌ಡಿ 17 ಎಸ್‌ಆರ್‌ಪಿ 07, ದಿನಾಂಕ 16-05-2007

**ಪ್ರಸ್ತಾವನೆ :**

ಮೇಲೆ (1)ರ ಓದಲಾದ ದಿನಾಂಕ 16–5–2007ರ ಸರ್ಕಾರಿ ಆದೇಶದಲ್ಲಿ 5ನೇ ರಾಜ್ಯ ವೇತನ ಆಯೋಗದ ಶಿಫಾರಸ್ಸಿನ ಮೇರೆಗೆ ರಾಜ್ಯ ಸರ್ಕಾರಿ ನೌಕರರ ವೇತನ ಶ್ರೇಣಿಗಳನ್ನು ದಿನಾಂಕ 1–7–2005 ರಿಂದ ಜಾರಿಗೆ ಬರುವಂತೆ ಪರಿಷ್ಕರಿಸಲಾಗಿದೆ.

5ನೇ ರಾಜ್ಯ ವೇತನ ಆಯೋಗವು ಸಲ್ಲಿಸಿರುವ ತನ್ನ ಅಂತಿಮ ವರದಿಯಲ್ಲಿನ 2ನೇ ಸಂಪುಟದಲ್ಲಿ ಕೆಲವೊಂದು ವರ್ಗದ ಹುದ್ದೆಗಳಿಗೆ ಹೆಚ್ಚಿನ ವೇತನ ಶ್ರೇಣಿಗಳನ್ನು ನೀಡುವ ಕುರಿತು ಶಿಫಾರಸ್ಸು ಮಾಡಿದೆ. ವೇತನ ಆಯೋಗವು ಮಾಡಿರುವ ಶಿಫಾರಸ್ಸನ್ನು ಕೂಲಂಕಷವಾಗಿ ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಎಫ್‌ಡಿ 25 ಎಸ್‌ಆರ್‌ಪಿ 2011, ಬೆಂಗಳೂರು, ದಿನಾಂಕ 20-04-2011**

2007ರ ಕರ್ನಾಟಕ ನಾಗರಿಕ ಸೇವಾ (ಪರಿಷ್ಕೃತ ವೇತನ) ನಿಯಮಗಳ ನಿಯಮ 4ರ ಉಪ–ನಿಯಮ (2)ರ ಮೂಲಕ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು, ಕೆಳಗಿನ ಪಟ್ಟಿಯ ಅಂಕಣ (2)ರಲ್ಲಿ ನಿರ್ದಿಷ್ಟ ಪಡಿಸಿದ ಹುದ್ದೆಗಳಿಗೆ ಅನ್ವಯವಾಗುವ ವೇತನ ಶ್ರೇಣಿಯನ್ನು ಪಟ್ಟಿಯಲ್ಲಿನ ಅಂಕಣ (3)ರಲ್ಲಿ ನಮೂದಿಸಿರುವ ವೇತನ ಶ್ರೇಣಿಗೆ ಬದಲಾಗಿ ಅಂಕಣ (4)ರಲ್ಲಿ ನಮೂದಿಸಿರುವ ವೇತನ ಶ್ರೇಣಿ ಆಗಿರತಕ್ಕದ್ದೆಂದು ಈ ಮೂಲಕ ಆದೇಶಿಸಿದೆ.

| ಇಲಾಖೆ | ಹುದ್ದೆ | ಪ್ರಸ್ತುತ 2007ರ ವೇತನ ಶ್ರೇಣಿ ರೂ. | ಪರಿಷ್ಕೃತ 2007ರ ವೇತನ ಶ್ರೇಣಿ ರೂ. |
|---|---|---|---|
| 1 | 2 | 3 | 4 |
| ಪೊಲೀಸ್ ಇಲಾಖೆ (ವಿಧಿ ವಿಜ್ಞಾನ ಪ್ರಯೋಗಾಲಯ) | 1. ವೈಜ್ಞಾನಿಕ ಸಹಾಯಕ | 8825–16000 | 10800–20025 |
| | 2. ವೈಜ್ಞಾನಿಕ ಅಧಿಕಾರಿ | 11400–21600 | 12000–22650 |

2. ಈ ಆದೇಶದ ಮೂಲಕ ಮಂಜೂರು ಮಾಡಲಾದ ಪರಿಷ್ಕೃತ ವೇತನ ಶ್ರೇಣಿಗಳು ತಕ್ಷಣದಿಂದ ಜಾರಿಗೆ ಬರುತ್ತವೆ.

3. ಮೇಲಿನ ಪಟ್ಟಿಯಲ್ಲಿ ನಮೂದಿಸಿರುವ ಹುದ್ದೆಗಳನ್ನು ಧಾರಣ ಮಾಡಿರುವ ನೌಕರರ ವೇತನವನ್ನು ಪರಿಷ್ಕೃತ ವೇತನ ಶ್ರೇಣಿಯಲ್ಲಿ ಕರ್ನಾಟಕ ನಾಗರೀಕ ಸೇವಾ ನಿಯಮಗಳ ನಿಯಮ 43ರಲ್ಲಿ ಕಲ್ಪಿಸಿರುವ ಅವಕಾಶಗಳ ಅನುಸಾರ ನಿಗದಿಪಡಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಸುಂದರ ರಾಜ ಗುಪ್ತ**
ಸರ್ಕಾರದ ಉಪ ಕಾರ್ಯದರ್ಶಿ
ಆರ್ಥಿಕ ಇಲಾಖೆ (ಸೇವೆಗಳು–2)

ಪಿ.ಆರ್. 1172

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಕರ್ನಾಟಕ ಗೆಜೆಟೆಡ್ ಪ್ರೊಬೇಷನರುಗಳ ನೇಮಕಾತಿ (ಸ್ಪರ್ಧಾತ್ಮಕ ಪರೀಕ್ಷೆಗಳ ಮೂಲಕ ನೇಮಕ) ನಿಯಮಗಳು, 1997ರ ವ್ಯಾಪ್ತಿಯಲ್ಲಿ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯ ಕಾರ್ಯನಿರ್ವಾಹಕ ಅಧಿಕಾರಿ, ಪಂಚಾಯತ್ ರಾಜ್/ಸಹಾಯಕ ಕಾರ್ಯದರ್ಶಿ, ಪಂಚಾಯತ್ ರಾಜ್ ವೃಂದವನ್ನು ಸೇರಿಸುವ ಕುರಿತು.

**ಓದಲಾಗಿದೆ :** ದಿನಾಂಕ 20–1–2011ರ ಅಧಿಸೂಚನೆ ಸಂಖ್ಯೆ: ಗ್ರಾಅಪ 306 ಕೆಎಸ್‌ಎಸ್ 2005,

**ಪ್ರಸ್ತಾವನೆ :**

ಕರ್ನಾಟಕ ಗೆಜೆಟೆಡ್ ಪ್ರೊಬೇಷನರುಗಳ (ಸ್ಪರ್ಧಾತ್ಮಕ ಪರೀಕ್ಷೆಗಳ ಮೂಲಕ ನೇಮಕ) 1997ರ ಅನುಸೂಚಿ–1ರಲ್ಲಿರುವ ಸಮೂಹ–ಎ ಹುದ್ದೆಗಳ ಪಟ್ಟಿಯ ಕ್ರ.ಸಂ. 6ರನ್ವಯ ಕರ್ನಾಟಕ ಸಾಮಾನ್ಯ ಸೇವೆ (ಅಭಿವೃದ್ಧಿ ಶಾಖೆ ಮತ್ತು ಸ್ಥಳೀಯ ಆಡಳಿತ ಶಾಖೆ)ಯ ಜಿಲ್ಲಾ ಅಭಿವೃದ್ಧಿ

ಸಹಾಯಕ ಹುದ್ದೆಗಳನ್ನು ಈ ನಿಯಮಗಳನ್ವಯ ಭರ್ತಿಮಾಡಲು ಆಸ್ಪದವಿರುತ್ತದೆ. ಮೇಲೆ ಓದಲಾದ ದಿನಾಂಕ 20–1–2011ರ ಅಧಿಸೂಚನೆಯಲ್ಲಿ ಕರ್ನಾಟಕ ಸಾಮಾನ್ಯ ಸೇವೆ (ಅಭಿವೃದ್ಧಿ ಶಾಖೆ ಮತ್ತು ಸ್ಥಳೀಯ ಆಡಳಿತ ಶಾಖೆ)ಯ ವೃಂದ ಮತ್ತು ನೇಮಕಾತಿ ನಿಯಮಗಳು, 2008ರನ್ನು ರಚಿಸಲಾಗಿದ್ದು, ಈ ನಿಯಮಗಳು ದಿನಾಂಕ 20–1–2011ರಿಂದ ಜಾರಿಗೆ ಬಂದಿರುತ್ತವೆ. ಈ ನಿಯಮಗಳನ್ವಯ 'ಕಾರ್ಯನಿರ್ವಾಹಕ ಅಧಿಕಾರಿ/ಸಹಾಯಕ ಕಾರ್ಯದರ್ಶಿ, ಪಂಚಾಯತ್ ರಾಜ್' ವೃಂದದಲ್ಲಿನ ಹುದ್ದೆಗಳಲ್ಲಿ ಶೇಕಡಾ 60ರಷ್ಟನ್ನು ಕರ್ನಾಟಕ ಗೆಜೆಟೆಡ್ ಪ್ರೊಬೇಷನರುಗಳ (ಸ್ಪರ್ಧಾತ್ಮಕ ಪರೀಕ್ಷೆಗಳ ಮೂಲಕ ನೇಮಕ) ನಿಯಮಗಳು, 1997ರನ್ವಯ ನೇರನೇಮಕಾತಿ ಮೂಲಕ ಭರ್ತಿ ಮಾಡಲು ಆಸ್ಪದ ಕಲ್ಪಿಸಲಾಗಿದೆ. ಈ ಹಿನ್ನೆಲೆಯಲ್ಲಿ ಅನುಸೂಚಿ–1ರ ಕಲಂ 6ರಲ್ಲಿ ಕರ್ನಾಟಕ ಸಾಮಾನ್ಯ ಸೇವೆ (ಅಭಿವೃದ್ಧಿ ಶಾಖೆ ಮತ್ತು ಸ್ಥಳೀಯ ಆಡಳಿತ ಶಾಖೆ) ಯಲ್ಲಿನ ಕಾರ್ಯನಿರ್ವಾಹಕ ಅಧಿಕಾರಿ/ಸಹಾಯಕ ಕಾರ್ಯದರ್ಶಿ ಹುದ್ದೆಗಳನ್ನು ಅಳವಡಿಸುವ ಅಗತ್ಯತೆಯ ಬಗ್ಗೆ ಪರಿಶೀಲಿಸಿ ಕೆಳಕಂಡಂತೆ ಆದೇಶಿಸಲಾಗಿದೆ:–

**ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 64 ಸೆನೆನಿ 2011, ಬೆಂಗಳೂರು, ದಿನಾಂಕ 26–04–2011**

ಕರ್ನಾಟಕ ಗೆಜೆಟೆಡ್ ಪ್ರೊಬೇಷನರುಗಳ (ಸ್ಪರ್ಧಾತ್ಮಕ ಪರೀಕ್ಷೆಗಳ ಮೂಲಕ ನೇಮಕ) ನಿಯಮಗಳು, 1997ರ ನಿಯಮ–3ರ ಉಪ ನಿಯಮ (1)ರ ಖಂಡ (ಬಿ)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸದರಿ ನಿಯಮಗಳ ಅನುಸೂಚಿ–I (Schedule-Iರ 'ಗ್ರೂಪ್–ಎ/ Group-A' ಎನ್ನುವ ಶೀರ್ಷಿಕೆಯಡಿ ಕ್ರಮ ಸಂಖ್ಯೆ: 6, ಕಲಂ 3ರ ಕೆಳಗಿರುವ 'ಜಿಲ್ಲಾ ಅಭಿವೃದ್ಧಿ ಸಹಾಯಕ/District Development Assistant' ಎಂಬ ವೃಂದವನ್ನು ತೆಗೆದುಹಾಕಿ ಅದರ ಬದಲಾಗಿ **"ಕಾರ್ಯನಿರ್ವಾಹಕ ಅಧಿಕಾರಿ, ಪಂಚಾಯತ್ ರಾಜ್/ಸಹಾಯಕ ಕಾರ್ಯದರ್ಶಿ, ಪಂಚಾಯತ್ ರಾಜ್"** (Executive Officer, Panchayat Raj/Assistant Secretary, Panchayat Raj) ಎಂಬ ವೃಂದವನ್ನು ಸೇರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ದೇವರಾಜು**
ಸರ್ಕಾರದ ಅಧೀನ ಕಾರ್ಯದರ್ಶಿ
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ
(ಸೇವಾ ನಿಯಮಗಳು–1)

ಪಿ.ಆರ್. 1173

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** 2011–12ನೇ ಸಾಲಿನಲ್ಲಿ ಮಾಡುವ ಸರ್ಕಾರಿ ನೌಕರರ ವರ್ಗಾವಣೆಗಳ ಬಗ್ಗೆ ಮಾರ್ಗಸೂಚಿಗಳು.

**ಓದಲಾಗಿದೆ :** 1) ಸರ್ಕಾರಿ ಆದೇಶ ಸಂಖ್ಯೆ: ಡಿಪಿಎಆರ್ 4 ಎಸ್‌ಟಿಆರ್ 2001, ದಿನಾಂಕ 22–11–2001
2) ಸರ್ಕಾರಿ ಆದೇಶ ಸಂಖ್ಯೆ: ಡಿಪಿಎಆರ್ 11 ಸೇನೌವ 2010, ದಿನಾಂಕ 13–5–2010

**ಪ್ರಸ್ತಾವನೆ :**

ಮೇಲೆ ಓದಲಾದ ದಿನಾಂಕ 22–11–2001ರ ಸರ್ಕಾರದ ಆದೇಶದಲ್ಲಿ ಸರ್ಕಾರಿ ನೌಕರರ ವರ್ಗಾವಣೆ ಕುರಿತಂತೆ ವಿಸ್ತೃತ ಮಾರ್ಗಸೂಚಿಗಳನ್ನು ನೀಡಲಾಗಿದ್ದು, ಈ ಮಾರ್ಗಸೂಚಿಗಳ ಪ್ರಕಾರ ಸರ್ಕಾರಿ ನೌಕರರ ವರ್ಗಾವಣೆಗಳನ್ನು ಪ್ರತಿ ವರ್ಷ ಏಪ್ರಿಲ್ ಮತ್ತು ಮೇ ತಿಂಗಳಲ್ಲಿ ಮಾತ್ರ ಕೆಲವು ಷರತ್ತಿಗೊಳಪಟ್ಟು ಮಾಡಬಹುದಾಗಿದೆ. ಮೇಲೆ ಉಲ್ಲೇಖಿಸಲಾದ ದಿನಾಂಕ 13–5–2010ರ ಆದೇಶದಲ್ಲಿ ಕೆಲವು ಮಾರ್ಪಾಟುಗಳನ್ನು ಮಾಡಿ ಈ ಮಾರ್ಗಸೂಚಿಗಳನ್ನು ಅನುಸರಿಸಲು ತೀರ್ಮಾನಿಸಲಾಗಿತ್ತು. ಅದರಂತೆ 2011–12ನೇ ಸಾಲಿನಲ್ಲಿ ದಿನಾಂಕ 13–5–2010ರ ಸರ್ಕಾರದ ಆದೇಶವನ್ನು ಮಾರ್ಪಡಿಸಿ ದಿನಾಂಕ 22–11–2001ರ ಮಾರ್ಗಸೂಚಿಗಳನ್ನೇ ಅನುಸರಿಸಲು ತೀರ್ಮಾನಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ ಸಿಆಸುಇ 12 ಸೇನೌವ 2011, ಬೆಂಗಳೂರು, ದಿನಾಂಕ 27–4–2011**

2011–12ನೇ ಸಾಲಿನಲ್ಲಿ ಪೊಲೀಸು ಸಿಬ್ಬಂದಿ ಮಂಡಳಿ (Police Establishment Board)ಯ ವ್ಯಾಪ್ತಿಗೊಳಪಡುವ ಪೊಲೀಸು ಸಿಬ್ಬಂದಿಯನ್ನು ಮತ್ತು ಕರ್ನಾಟಕ ರಾಜ್ಯ ಸಿವಿಲ್ ಸೇವೆಗಳ (ಶಿಕ್ಷಕರ ವರ್ಗಾವಣೆ ನಿಯಂತ್ರಣ) ಅಧಿನಿಯಮ, 2007ರ ವ್ಯಾಪ್ತಿಗೊಳಪಡುವ ಶಿಕ್ಷಕರನ್ನು ಹೊರತುಪಡಿಸಿ, ಬೇರೆ ಸರ್ಕಾರಿ ನೌಕರರನ್ನು ಈ ಕೆಳಕಂಡ ಸಂದರ್ಭಗಳಲ್ಲಿ ಮಾತ್ರ ವರ್ಗಾವಣೆ ಮಾಡಬಹುದು.

1) ಖಾಲಿ ಇರುವ ಆಡಳಿತಾತ್ಮಕ ಹಿತದೃಷ್ಟಿಯಿಂದ ಅತ್ಯಾವಶ್ಯಕವಾಗಿ ತುಂಬಬೇಕಾದ ಹುದ್ದೆಗಳ ಪ್ರಕರಣಗಳು, ತತ್ಪರಿಣಾಮವಾಗಿ ಖಾಲಿಯಾಗುವ ಹುದ್ದೆಗಳನ್ನು ಭರ್ತಿ ಮಾಡುವ ಪ್ರಕರಣಗಳು;
2) ಪತಿ–ಪತ್ನಿ ಪ್ರಕರಣಗಳು;
3) ಪರಸ್ಪರ ವರ್ಗಾವಣೆಗಳು–ಸಂಬಂಧಿಸಿದ ಸಿಬ್ಬಂದಿಯ ಒಪ್ಪಿಗೆ ಪತ್ರದೊಂದಿಗೆ;
4) ತೀವ್ರತರವಾದ ಖಾಯಿಲೆಯಿಂದ ಬಳಲುತ್ತಿರುವ ನೌಕರರ/ನೌಕರರ ಅವಲಂಬಿತರ/ತಂದೆ ತಾಯಿಯವರ ವೈದ್ಯಕೀಯ ಚಿಕಿತ್ಸೆ/ಆರೋಗ್ಯದ ಹಿತದೃಷ್ಟಿಯಿಂದ ಮಾಡಬೇಕಾದ ವರ್ಗಾವಣೆಗಳು;
5) ಸಾರ್ವಜನಿಕರಿಂದ ಸ್ವೀಕೃತವಾದ ದೂರುಗಳ ಮೇರೆಗೆ ಇಲಾಖಾ ವಿಚಾರಣೆಗೊಳಪಟ್ಟ ಪ್ರಕರಣಗಳು;
6) ಮುಂಬಡ್ತಿಯಿಂದ ತುಂಬಬೇಕಾದ ಹುದ್ದೆಗಳು–ಖಾಲಿ ಹುದ್ದೆಗಳಿಗೆ ಮಾತ್ರ;
7) ಮುಂದಿನ ಎರಡು ವರ್ಷಗಳಲ್ಲಿ ನಿವೃತ್ತಿ ಹೊಂದಲಿರುವ ಸಿಬ್ಬಂದಿಯ ಕೋರಿಕೆಗಳು

2. ಮೇಲೆ (1)ರಲ್ಲಿ ಓದಲಾದ ದಿನಾಂಕ 22–11–2001ರ ಸರ್ಕಾರಿ ಆದೇಶದ ಕಂಡಿಕೆ 3ರಲ್ಲಿ ನಮೂದಿಸಿದ ಕನಿಷ್ಠ ಸೇವಾವಧಿಯನ್ನು ಪೂರೈಸಿದ ನೌಕರರನ್ನು ಕಡ್ಡಾಯವಾಗಿ ವರ್ಗಾಯಿಸುವುದು.

3. ಒಂದು ಇಲಾಖೆಯಿಂದ ಇನ್ನೊಂದು ಇಲಾಖೆಗೆ ಅಧಿಕಾರಿ/ನೌಕರರ ನಿಯೋಜನೆಯನ್ನು ವರ್ಗಾವಣೆ ಅವಧಿಯಲ್ಲಿ ಮಾತ್ರ ಮಾಡತಕ್ಕದ್ದು. ಸಂಬಂಧಿತ ಇಲಾಖೆಯ ಸ್ಪಷ್ಟ ಕೋರಿಕೆಯಿಲ್ಲದೇ ನಿಯೋಜನೆ ಮೇಲೆ ನೇಮಕ ಮಾಡತಕ್ಕದ್ದಲ್ಲ.

4. ಯಾವುದೇ ಅಧಿಕಾರಿ/ನೌಕರರು ಕಡ್ಡಾಯ ನಿರೀಕ್ಷಣೆಯಲ್ಲಿರುವ ಸಂದರ್ಭಗಳು ಉದ್ಭವವಾಗದ ರೀತಿಯಲ್ಲಿ ವರ್ಗಾವಣೆಗಳನ್ನು ಮಾಡತಕ್ಕದ್ದು.

5. 'ಸಿ' ಮತ್ತು 'ಡಿ' ವೃಂದದ ನೌಕರರ ವರ್ಗಾವಣೆಗಳನ್ನು ಸಂಬಂಧಿತ ವೃಂದ ನಿರ್ವಹಣಾ ಪ್ರಾಧಿಕಾರಗಳು ಮಾಡತಕ್ಕದ್ದು. 'ಎ' ಮತ್ತು 'ಬಿ' ಗುಂಪಿನ ಅಧಿಕಾರಿಗಳ ವರ್ಗಾವಣೆಗಳನ್ನು ವೃಂದ ನಿರ್ವಹಣಾ ಪ್ರಾಧಿಕಾರದ ಶಿಫಾರಸ್ಸಿನ ಆಧಾರದ ಮೇಲೆ ಸಂಬಂಧಿತ ಸಚಿವರ ಅನುಮೋದನೆಯನ್ನು ಪಡೆದು ಮಾಡತಕ್ಕದ್ದು.

6. ಈ ರೀತಿ ಮಾಡಲಾಗುವ ಒಟ್ಟು ವರ್ಗಾವಣೆಗಳು ಗ್ರೂಪ್-ಎ ಮತ್ತು ಬಿ ವೃಂದಕ್ಕೆ ಸಂಬಂಧಿಸಿದಂತೆ ಕಾರ್ಯಕಾರಿ ವೃಂದಬಲದ (Working strength) ಶೇಕಡ 3 ಹಾಗೂ ಗ್ರೂಪ್-ಸಿ ಮತ್ತು ಡಿ ವೃಂದಕ್ಕೆ ಸಂಬಂಧಿಸಿದಂತೆ ಶೇಕಡ 4.5 ಮೀರುವಂತಿಲ್ಲ.

7. ಮೇಲ್ಕಂಡಂತೆ ವರ್ಗಾವಣೆ ಪ್ರಕ್ರಿಯೆಗಳನ್ನು ವೃಂದ ನಿರ್ವಹಣಾ ಪ್ರಾಧಿಕಾರದ ಶಿಫಾರಸ್ಸುಗಳ ಮೇಲೆ ಈ ಆದೇಶದ ದಿನಾಂಕದಿಂದ ದಿನಾಂಕ 31-5-2011ರ ಅವಧಿಯಲ್ಲಿ ಮಾಡತಕ್ಕದ್ದು. ಈ ಅವಧಿಯ ನಂತರ ಯಾವುದೇ ವರ್ಗಾವಣೆ ಮಾಡಬೇಕಾದಲ್ಲಿ ಅದಕ್ಕೆ ಮಾನ್ಯ ಮುಖ್ಯಮಂತ್ರಿಯವರ ಪೂರ್ವಾನುಮೋದನೆಯನ್ನು ಕಡತದಲ್ಲಿ ಪಡೆಯತಕ್ಕದ್ದು.

8. ಉಳಿದಂತೆ ದಿನಾಂಕ 22-11-2001ರ ಆದೇಶದಲ್ಲಿನ ಮಾರ್ಗಸೂಚಿಗಳನ್ನು ಕಡ್ಡಾಯವಾಗಿ ಪಾಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ದೇವರಾಜು**

ಸರ್ಕಾರದ ಅಧೀನ ಕಾರ್ಯದರ್ಶಿ

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ

ಪಿ.ಆರ್. 1174 (ಸೇವಾ ನಿಯಮಗಳು-1)

## ಕಂದಾಯ ಸಚಿವಾಲಯ

**ವಿಷಯ :** ಆಸರೆ ಯೋಜನೆಯಡಿಯಲ್ಲಿ ಮನೆ ನಿರ್ಮಾಣಕ್ಕಾಗಿ ವಿದ್ಯುಚ್ಛಕ್ತಿ ವ್ಯತ್ಯಯ ಉಂಟಾದ ಗ್ರಾಮಗಳಲ್ಲಿ ಡೀಸೆಲ್ ಜನರೇಟರನ್ನು ಬಾಡಿಗೆ ಆಧಾರದ ಮೇಲೆ ಪಡೆಯುವ ಬಗ್ಗೆ.

**ಓದಲಾಗಿದೆ :** ಬಾಗಲಕೋಟೆ ಜಿಲ್ಲಾಧಿಕಾರಿಗಳ ಪತ್ರ ಸಂ. ಆರ್‌ಬಿ/ಸಿ.ಎ.ಎಲ್./ಸಿಆರ್-06/10-11, ದಿನಾಂಕ 17-03-2011.

**ಪ್ರಸ್ತಾವನೆ :**

ಮೇಲೆ ಓದಲಾದ ಬಾಗಲಕೋಟೆ ಜಿಲ್ಲಾಧಿಕಾರಿಗಳ ಪತ್ರದಲ್ಲಿ ಆಸರೆ ಯೋಜನೆಯಡಿಯಲ್ಲಿ ಮನೆ ನಿರ್ಮಾಣಕ್ಕಾಗಿ ವಿದ್ಯುಚ್ಛಕ್ತಿ ವ್ಯತ್ಯಯ ಉಂಟಾದ ಗ್ರಾಮಗಳಲ್ಲಿ ಡೀಸೆಲ್ ಜನರೇಟರನ್ನು ಬಾಡಿಗೆ ಆಧಾರದ ಮೇಲೆ ಪಡೆದು, ಈ ಡೀಸೆಲ್ ಜನರೇಟರ್‌ನಿಂದ ಪಡೆದಂತ ವಿದ್ಯುಚ್ಛಕ್ತಿಯನ್ನು ಮನೆ ನಿರ್ಮಾಣಕ್ಕೆ ನೀರನ್ನು ಒದಗಿಸಲು ಬಳಸಿಕೊಳ್ಳಲಾಗಿರುವುದರಿಂದ, ಈ ಡೀಸೆಲ್ ಜನರೇಟರ್‌ನ ಬಾಡಿಗೆಯ ಹಣ ಬಾಗಲಕೋಟೆ ಜಿಲ್ಲಾಧಿಕಾರಿಗಳು ರೂ. 4,28,680/-ಗಳನ್ನು ಬಿಡುಗಡೆ ಮಾಡುವಂತೆ ಬಾಗಲಕೋಟೆ ಜಿಲ್ಲಾಧಿಕಾರಿಗಳು ಕೋರಿರುತ್ತಾರೆ. ಈ ಹಿನ್ನೆಲೆಯಲ್ಲಿ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ಆರ್‌ಡಿ 400 ಟಿಎನ್‌ಆರ್ 2010, ಬೆಂಗಳೂರು, ದಿನಾಂಕ 23-04-2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಸಂದರ್ಭದ ಹಿನ್ನೆಲೆಯಲ್ಲಿ ಆಸರೆ ಯೋಜನೆಯಡಿಯಲ್ಲಿ ಮನೆಗಳ ನಿರ್ಮಾಣಕ್ಕಾಗಿ ಡೀಸೆಲ್ ಜನರೇಟರ್‌ನ್ನು ಬಾಡಿಗೆ ಆಧಾರದ ಮೇಲೆ ಪಡೆದ ಬಾಬ್ತು ರೂ. 4,28,680/- (ರೂಪಾಯಿ ನಾಲ್ಕು ಲಕ್ಷದ ಇಪ್ಪತ್ತೆಂಟು ಸಾವಿರದ ಆರು ನೂರ ಎಂಬತ್ತು ರೂಪಾಯಿಗಳು ಮಾತ್ರ) ಗಳನ್ನು ಜಿಲ್ಲಾಧಿಕಾರಿಗಳು, ಬಾಗಲಕೋಟೆ ಜಿಲ್ಲೆ, ಬಾಗಲಕೋಟೆ ಇವರಿಗೆ ಬಿಡುಗಡೆ ಮಾಡಲು ಮಂಜೂರಾತಿ ನೀಡಿದೆ.

ಈ ವೆಚ್ಚವನ್ನು ಲೆಕ್ಕ ಶೀರ್ಷಿಕೆ 8235-00-111-0-02 'Public Contributions to the Calamity Relief' ಅಡಿಯಲ್ಲಿ ಭರಿಸತಕ್ಕದ್ದು.

ಮೇಲಿನಂತೆ ಬಿಡುಗಡೆ ಮಾಡಿರುವ ಮೊತ್ತವನ್ನು ಜಿಲ್ಲಾಧಿಕಾರಿಗಳು ಸದರಿ ಲೆಕ್ಕ ಶೀರ್ಷಿಕೆ ಅಡಿಯಲ್ಲಿ ಡ್ರಾ ಮಾಡಲು ಪೇಯಿಸ್ ರಸೀದಿ (ಸಿಟಿಎಸ್ 8) ಬಿಲ್ಲು ತಯಾರಿಸಿ, ಮೇಲು ಸಹಿ ಮಾಡಿ ಖಜಾನೆಗೆ ಸಲ್ಲಿಸಲು ಸೂಚಿಸಿದೆ.

ಈಗ ಬಿಡುಗಡೆ ಮಾಡುತ್ತಿರುವ ಅನುದಾನಕ್ಕೆ ಹಣ ಬಳಕೆ ಪತ್ರವನ್ನು ವೆಚ್ಚದ ವಿವರಗಳೊಂದಿಗೆ ಸಲ್ಲಿಸುವುದು. ಬಿಡುಗಡೆ ಮಾಡಿರುವ ಹಣವನ್ನು ಹೇಗೆ ಉಪಯೋಗಿಸಲಾಗಿದೆ ಮತ್ತು ಭೌತಿಕ ಹಾಗೂ ಆರ್ಥಿಕ ಪ್ರಗತಿಯ ವಿವರಗಳನ್ನು ಸಹ ಸಲ್ಲಿಸುವುದು.

ಈ ಮೊತ್ತವನ್ನು ಯಾವ ಉದ್ದೇಶಕ್ಕಾಗಿ ಬಿಡುಗಡೆ ಮಾಡಲಾಗಿದೆಯೋ ಅದೇ ಉದ್ದೇಶಕ್ಕೆ ಉಪಯೋಗಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಸ್. ಬಾಲಕೃಷ್ಣಯ್ಯ**

ಪಿ.ಆರ್. 1175 ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ (ಪಿ.ನಿ. & ಸೇವೆಗಳು-2)

## ಕಂದಾಯ ಸಚಿವಾಲಯ

**ವಿಷಯ :** 2011ನೇ ಸಾಲಿನಲ್ಲಿ ರಾಜ್ಯದಲ್ಲಿ ಕುಡಿಯುವ ನೀರಿಗೆ ಪ್ರಕೃತಿ ವಿಕೋಪ ಪರಿಹಾರ ನಿಧಿಯಿಂದ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :** ಜಿಲ್ಲಾಧಿಕಾರಿಗಳಿಂದ ಬಂದಿರುವ ಬೇಡಿಕೆ ಪತ್ರಗಳು

**ಪ್ರಸ್ತಾವನೆ :**

2011ನೇ ಸಾಲಿನಲ್ಲಿ ರಾಜ್ಯದಲ್ಲಿ, ಬೇಸಿಗೆ ಕಾಲ ಪ್ರಾರಂಭವಾಗಿದ್ದು ಕುಡಿಯುವ ನೀರಿನ ಸಮಸ್ಯೆ ಉದ್ಭವವಾಗಿದ್ದು ಅದನ್ನು ನಿವಾರಿಸಲು ಜಿಲ್ಲಾಧಿಕಾರಿಗಳು ಪ್ರಕೃತಿ ವಿಕೋಪ ಪರಿಹಾರ ನಿಧಿಯಿಂದ ಅನುದಾನ ಬಿಡುಗಡೆ ಮಾಡುವಂತೆ ಬೇಡಿಕೆ ಸಲ್ಲಿಸಿರುತ್ತಾರೆ. ಈ ಹಿನ್ನೆಲೆಯಲ್ಲಿ ಜಿಲ್ಲಾಧಿಕಾರಿಗಳ ಪ್ರಸ್ತಾವನೆಗಳನ್ನು ಕೂಲಂಕಷವಾಗಿ ಪರಿಶೀಲಿಸಿ ರಾಜ್ಯದಲ್ಲಿ ಕುಡಿಯುವ ನೀರಿನ ಸಮಸ್ಯೆಯನ್ನು ಬಗೆಹರಿಸಲು, ಪ್ರಕೃತಿ ವಿಕೋಪ ಪರಿಹಾರ ನಿಧಿಯಿಂದ ಅನುದಾನ ಬಿಡುಗಡೆ ಮಾಡಲು ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಕಂಇ 59 ಟಿಎನ್ಆರ್ 2011, ಬೆಂಗಳೂರು, ದಿನಾಂಕ 21–04–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ರಾಜ್ಯದಲ್ಲಿ ಕುಡಿಯುವ ನೀರಿನ ಸಮಸ್ಯೆಯನ್ನು ಬಗೆಹರಿಸಲು ಪ್ರಕೃತಿ ವಿಕೋಪ ಪರಿಹಾರ ನಿಧಿಯಿಂದ ಈ ಕೆಳಕಂಡಂತೆ ಜಿಲ್ಲೆಗಳ ಜಿಲ್ಲಾಧಿಕಾರಿಗಳಿಗೆ ಅನುದಾನ ಬಿಡುಗಡೆ ಮಾಡಲು ಮಂಜೂರಾತಿ ನೀಡಲಾಗಿದೆ.

| ಕ್ರ. ಸಂ. | ಜಿಲ್ಲೆಯ ಹೆಸರು | ಬಿಡುಗಡೆ ಮಾಡಿದ ಅನುದಾನ (ರೂ. ಲಕ್ಷಗಳಲ್ಲಿ) |
|---|---|---|
| 1 | ಬೆಂಗಳೂರು (ಗ್ರಾ) | 50.00 |
| 2 | ಬಳ್ಳಾರಿ | 100.00 |
| 3 | ಬಿಜಾಪುರ | 50.00 |
| 4 | ಬೀದರ್ | 50.00 |
| 5 | ಚಾಮರಾಜನಗರ | 50.00 |
| 6 | ಚಿಕ್ಕಮಗಳೂರು | 50.00 |
| 7 | ಚಿತ್ರದುರ್ಗ | 100.00 |
| 8 | ಚಿಕ್ಕಬಳ್ಳಾಪುರ | 50.00 |
| 9 | ದಕ್ಷಿಣ ಕನ್ನಡ | 50.00 |
| 10 | ದಾವಣಗೆರೆ | 50.00 |
| 11 | ಗುಲ್ಬರ್ಗ | 50.00 |
| 12 | ಹಾವೇರಿ | 50.00 |
| 13 | ಕೋಲಾರ | 50.00 |
| 14 | ರಾಯಚೂರು | 100.00 |
| 15 | ರಾಮನಗರ | 50.00 |
| 16 | ಶಿವಮೊಗ್ಗ | 50.00 |
| 17 | ತುಮಕೂರು | 50.00 |
| 18 | ಉತ್ತರ ಕನ್ನಡ | 50.00 |
| 19 | ಯಾದಗಿರಿ | 50.00 |
| | ಒಟ್ಟು | 1,100,00 |

(ರೂ. ಒಂದು ಸಾವಿರದ ನೂರು ಲಕ್ಷಗಳು ಮಾತ್ರ)

ಮೇಲಿನಂತೆ ಬಿಡುಗಡೆ ಮಾಡಿರುವ ಅನುದಾನವನ್ನು ಕುಡಿಯುವ ನೀರಿಗಾಗಿ ನಿಯಮಾನುಸಾರ ಉಪಯೋಗಿಸಿಕೊಳ್ಳತಕ್ಕದ್ದು.

ಮೇಲಿನಂತೆ ಬಿಡುಗಡೆ ಮಾಡಿರುವ ಅನುದಾನವನ್ನು ಸಿ.ಆರ್.ಎಫ್. ಬ್ಯಾಂಕ್ ಖಾತೆಯಲ್ಲಿ ಲಭ್ಯವಿರುವ ಮೊತ್ತದಿಂದ ಬಿಡುಗಡೆ ಮಾಡಲು ಆದೇಶಿಸಲಾಗಿದೆ.

ಅನುದಾನ ವೆಚ್ಚ ಮಾಡುವಾಗ ಸರ್ಕಾರವು ಕಾಲ ಕಾಲಕ್ಕೆ ಹೊರಡಿಸಿರುವ ಮಾರ್ಗಸೂಚಿ/ಆದೇಶ/ಸುತ್ತೋಲೆಗಳನ್ನು ಪಾಲಿಸುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಸ್. ಬಾಲಕೃಷ್ಣಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ

(ವಿಪತ್ತು ನಿರ್ವಹಣೆ ಮತ್ತು ಸೇವೆಗಳು–2)

ಪಿ.ಆರ್. 1176

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ :** "ಪಂಚಾಯಿತಿ ಅಭಿವೃದ್ಧಿ ಅಧಿಕಾರಿ" ಹುದ್ದೆಗಳ ನೇರ ನೇಮಕಾತಿಯಲ್ಲಿ ಅಂಗವಿಕಲರಿಗೆ ಮೀಸಲಾತಿ ನೀಡುವ ಬಗ್ಗೆ

**ಓದಲಾಗಿದೆ:** ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 115 ಗ್ರಾಪಂಕಾ 2008 (3), ದಿನಾಂಕ 07–07–2009.

**ಪ್ರಸ್ತಾವನೆ :**

ಮೇಲೆ ಓದಲಾದ ಸರ್ಕಾರದ ಆದೇಶದಲ್ಲಿ ಪಂಚಾಯಿತಿ ಅಭಿವೃದ್ಧಿ ಅಧಿಕಾರಿ ಹುದ್ದೆಗಳ ನೇರ ನೇಮಕಾತಿಯಲ್ಲಿ ಅಂಗವಿಕಲರ ಮೀಸಲಾತಿಯಿಂದ ವಿನಾಯಿತಿ ನೀಡಿ ಆದೇಶಿಸಲಾಗಿತ್ತು. ಈ ಆದೇಶವನ್ನು ಹಿಂಪಡೆಯಲು ಸರ್ಕಾರವು ನಿರ್ಣಯಿಸಿದೆ.

ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 88 ಗ್ರಾಪಂಕಾ 2011, ಬೆಂಗಳೂರು, ದಿನಾಂಕ: 21ನೇ ಏಪ್ರಿಲ್ 2011.**

ಪಂಚಾಯಿತಿ ಅಭಿವೃದ್ಧಿ ಅಧಿಕಾರಿ ಹುದ್ದೆಗಳ ನೇರ ನೇಮಕಾತಿಯಲ್ಲಿ ಅಂಗವಿಕಲರ ಮೀಸಲಾತಿಯಿಂದ ವಿನಾಯಿತಿ ನೀಡಿ ಹೊರಡಿಸಿದ್ದ ದಿನಾಂಕ 7–7–2009 ರ ಸರ್ಕಾರದ ಆದೇಶವನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಿಂಪಡೆಯಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸ್ವರ್ಣಲತ ಎಂ. ಭಂಡಾರೆ**

ಸರ್ಕಾರದ ಅಧೀನ ಕಾರ್ಯದರ್ಶಿ,

ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಇಲಾಖೆ

ಪಿ.ಆರ್. 1180

## ಪಶುಸಂಗೋಪನೆ ಮತ್ತು ಮೀನುಗಾರಿಕೆ ಸಚಿವಾಲಯ

**ವಿಷಯ :** ವೀರ್ಯ ಸಂಕಲನಾ ಕೇಂದ್ರ, ಕೊಯ್ಲಾ, ಪುತ್ತೂರು ತಾಲ್ಲೂಕು, ದಕ್ಷಿಣ ಕನ್ನಡ ಜಿಲ್ಲೆ ಇಲ್ಲಿನ ಪಶುವೈದ್ಯಕೀಯ ಮೇಲ್ವಿಚಾರಕರ ಹುದ್ದೆಯನ್ನು ಪಶು ಆಸ್ಪತ್ರೆ, ಮೂಡಬಿದ್ರಿ, ಮಂಗಳೂರು ತಾಲ್ಲೂಕು ದಕ್ಷಿಣ ಕನ್ನಡ ಜಿಲ್ಲೆ ಇಲ್ಲಿಗೆ ಸ್ಥಳಾಂತರಿಸುವಿಕೆ.

**ಓದಲಾಗಿದೆ:** ಪತ್ರ ಸಂಖ್ಯೆ: ಆಪಸಂ/ಡಿವಿಡಿ–3/ವಿವ–20/2009–10, ದಿನಾಂಕ:7–12–2010 ಹಾಗೂ 4–3–2011.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಪತ್ರಗಳಲ್ಲಿ ಆಯುಕ್ತರು, ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ ಇವರು ದಕ್ಷಿಣ ಕನ್ನಡ ಜಿಲ್ಲೆ ಪುತ್ತೂರು ತಾಲ್ಲೂಕಿನ ಜಾನುವಾರು ಸಂವರ್ಧನಾ ಮತ್ತು ತರಬೇತಿ ಕೇಂದ್ರ, ಕೊಯ್ಲಾ ಇಲ್ಲಿನ ಪಶುವೈದ್ಯಕೀಯ ಮೇಲ್ವಿಚಾರಕರ ಹುದ್ದೆಯನ್ನು ಪಶು ಆಸ್ಪತ್ರೆ, ಮೂಡಬಿದ್ರಿ ಇಲ್ಲಿಗೆ ಸ್ಥಳಾಂತರಿಸುವ ಕುರಿತು ದಕ್ಷಿಣ ಕನ್ನಡ ಜಿಲ್ಲಾ ಉಪ ನಿರ್ದೇಶಕರು ಪ್ರಸ್ತಾಪಿಸಿರುತ್ತಾರೆಂದು, ಹುದ್ದೆ ಸ್ಥಳಾಂತರಿಸಲು ಜಿಲ್ಲಾ ಪಂಚಾಯತ್ ಕೃಷಿ ಮತ್ತು ಕೈಗಾರಿಕಾ ಸ್ಥಾಯಿ ಸಮಿತಿ ಹಾಗೂ ಜಿಲ್ಲಾ ಪಂಚಾಯತ್ ಸಮನ್ವಯ ಸಭೆಯಲ್ಲಿ ಅನುಮೋದನೆಯಾಗಿರುತ್ತದೆಂದು ತಿಳಿಸಿರುತ್ತಾರೆ. ಕ್ಷೇತ್ರದಲ್ಲಿನ ಕಾರ್ಯಚಟುವಟಿಕೆಗಳಿಗೆ ತುಂಬಾ ತೊಂದರೆ ಆಗುವುದರಿಂದ ಹಾಗೂ ಉದ್ದೇಶಿತ ಹುದ್ದೆಯನ್ನು ಸ್ಥಳಾಂತರಿಸುವುದರಿಂದ ಕೇಂದ್ರದ ದೈನಂದಿನ ಕೆಲಸಗಳಿಗೆ ತೊಂದರೆಯಾಗುವ ಹಿನ್ನೆಲೆಯಲ್ಲಿ ಸದರಿ ಹುದ್ದೆಯನ್ನು ಸ್ಥಳಾಂತರಿಸುವುದು ಸೂಕ್ತವಲ್ಲವೆಂದು ಹಾಗೂ ಇಲಾಖಾ ಪುನರ್‌ರಚನೆ ವೇಳೆಯಲ್ಲಿ ಹುದ್ದೆ ಸ್ಥಳಾಂತರ ಪ್ರಸ್ತಾವನೆ ಬಗ್ಗೆ ಕ್ರಮ ಕೈಗೊಳ್ಳಬಹುದೆಂದು ಅಭಿಪ್ರಾಯಪಟ್ಟಿರುತ್ತಾರೆ.

2. ಆಯುಕ್ತರ ಪ್ರಸ್ತಾವನೆಯನ್ನು ಪರಿಶೀಲಿಸಲಾಯಿತು. ಜಾನುವಾರು ಸಂವರ್ಧನಾ ಮತ್ತು ತರಬೇತಿ ಕೇಂದ್ರ, ಕೊಯ್ಲಾ ಅಧೀನದ ವೀರ್ಯ ಸಂಕಲನಾ ಕೇಂದ್ರ ಶಾಖೆಗೆ ಲೆಕ್ಕಶೀರ್ಷಿಕೆ 2403–00–800–0–23 (ಇಂಡೋ–ಡ್ಯಾನಿಷ್) ಅಡಿ ಎರಡು ಪಶುವೈದ್ಯಕೀಯ ಮೇಲ್ವಿಚಾರಕರ ಹುದ್ದೆಗಳು ಮಂಜೂರಾಗಿದ್ದು, ಈ ಹುದ್ದೆಗಳನ್ನು ಕೇಂದ್ರದ ಕಾರ್ಯಚಟುವಟಿಕೆಗಳ ದೃಷ್ಟಿಯಿಂದ 1998–1999ರಿಂದ ಕಾಲಕಾಲಕ್ಕೆ ಮುಂದುವರೆಸಿಕೊಂಡು ಬರಲಾಗುತ್ತಿದೆ. ಓಡಿಟಿ ಮತ್ತು ಸಿಬ್ಬಂದಿ ಮಾದರಿ (Staff –Pattern)ಅನ್ವಯ ಪಶುವೈದ್ಯಕೀಯ ಆಸ್ಪತ್ರೆ ಮಾದರಿಯ ಸಂಸ್ಥೆಗೆ ಒಂದು ಪಶುವೈದ್ಯಕೀಯ ಮೇಲ್ವಿಚಾರಕ ಹುದ್ದೆಯನ್ನು ಮಂಜೂರು ಮಾಡಬೇಕಾಗಿರುತ್ತದೆ. ಆದರೆ ಮೂಡಬಿದ್ರಿ ಪಶು ಆಸ್ಪತ್ರೆಗೆ ಸಹಾಯಕ ನಿರ್ದೇಶಕರು, ಪಶುವೈದ್ಯಕೀಯ ಪರೀಕ್ಷಕರು ಹಾಗೂ ಡಿ–ದರ್ಜೆ ನೌಕರರ ಹುದ್ದೆಗಳು ಮಾತ್ರ ಮಂಜೂರಾಗಿದ್ದು, ಪಶುವೈದ್ಯಕೀಯ ಮೇಲ್ವಿಚಾರಕರ ಹುದ್ದೆ ಮಂಜೂರಾಗಿರುವುದಿಲ್ಲ. ಜಾನುವಾರು ಸಂವರ್ಧನಾ ಮತ್ತು ತರಬೇತಿ ಕೇಂದ್ರದ ವೀರ್ಯ ಸಂಕಲನಾ ಕೇಂದ್ರಕ್ಕೆ ಎರಡು ಪಶುವೈದ್ಯಕೀಯ ಮೇಲ್ವಿಚಾರಕರ ಹುದ್ದೆಗಳು ಮಂಜೂರಾಗಿದ್ದು, ಒಂದು ಹುದ್ದೆಯನ್ನು ಪಶು ಆಸ್ಪತ್ರೆ, ಮೂಡಬಿದ್ದೆಗೆ ಸ್ಥಳಾಂತರಿಸಿದಲ್ಲಿ ಯಾವುದೇ ತೊಂದರೆಯಾಗುವುದಿಲ್ಲ. ಬದಲಾಗಿ ಸಿಬ್ಬಂದಿ ಮಾದರಿಯಲ್ಲಿ ಸಮತೋಲನವನ್ನು ಕಾಯ್ದುಕೊಳ್ಳಬಹುದಾಗಿರುತ್ತದೆ. ವೀರ್ಯ ಸಂಕಲನಾ ಕೇಂದ್ರ, ಕೊಯ್ಲಾ, ಇಲ್ಲಿನ ಎರಡು ಪಶುವೈದ್ಯಕೀಯ ಮೇಲ್ವಿಚಾರಕ ಹುದ್ದೆಗಳ ಪೈಕಿ ಒಂದು ಹುದ್ದೆಯನ್ನು ಪಶುಆಸ್ಪತ್ರೆ, ಮೂಡಬಿದ್ರಿ ಇಲ್ಲಿಗೆ ಸ್ಥಳಾಂತರಿಸಲು ದಕ್ಷಿಣ ಕನ್ನಡ ಜಿಲ್ಲಾ ಪಂಚಾಯತ್‌ನ ಕೃಷಿ ಮತ್ತು ಕೈಗಾರಿಕಾ ಸ್ಥಾಯಿ ಸಮಿತಿ ಸಭೆಯು ಅನುಮೋದನೆ ನೀಡಿರುತ್ತದೆ ಹಾಗೂ ಹುದ್ದೆ ಸ್ಥಳಾಂತರಿಸಲು ಜಿಲ್ಲಾ ಉಸ್ತುವಾರಿ ಸಚಿವರು ಹಾಗೂ ಸ್ಥಳೀಯ ಶಾಸಕರೂ ಸಹ ಶಿಫಾರಸ್ಸು ಮಾಡಿರುತ್ತಾರೆ. ಮೂಡಬಿದ್ರಿ ಪಶುಆಸ್ಪತ್ರೆಯು ತಾಲ್ಲೂಕಿನ ಕೇಂದ್ರ ಸ್ಥಾನದಲ್ಲಿರುವುದರಿಂದ ಸುತ್ತಮುತ್ತಲಿನ ಜಾನುವಾರುಗಳ ಚಿಕಿತ್ಸೆ ದೃಷ್ಟಿಯಿಂದ ಅಲ್ಲಿಗೆ ಒಂದು ಪಶುವೈದ್ಯಕೀಯ ಮೇಲ್ವಿಚಾರಕರ ಹುದ್ದೆಯ ಅವಶ್ಯಕತೆ ಇರುತ್ತದೆ. ಈ ಎಲ್ಲಾ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿದ ಸರ್ಕಾರ, ಜಾನುವಾರು ಚಿಕಿತ್ಸೆ ಹಾಗೂ ರೈತಾಪಿ ವರ್ಗದ ಹಿತದೃಷ್ಟಿಯಿಂದ ಜಾನುವಾರು ಸಂವರ್ಧನಾ ಮತ್ತು ತರಬೇತಿ ಕೇಂದ್ರ, ಕೋಯ್ಲಾ ಅಧೀನದ ವೀರ್ಯ ಸಂಕಲನಾ ಕೇಂದ್ರ ಶಾಖೆಗೆ ಮಂಜೂರಾಗಿರುವ ಎರಡು ಪಶುವೈದ್ಯಕೀಯ ಮೇಲ್ವಿಚಾರಕರ ಹುದ್ದೆಗಳ ಪೈಕಿ ಒಂದು ಹುದ್ದೆಯನ್ನು ಲೆಕ್ಕಶೀರ್ಷಿಕೆ ಸಮೇತ ಪಶುಆಸ್ಪತ್ರೆ, ಮೂಡಬಿದ್ರೆ, ಮಂಗಳೂರು ತಾಲ್ಲೂಕು, ದಕ್ಷಿಣ ಕನ್ನಡ ಜಿಲ್ಲೆ ಇಲ್ಲಿಗೆ ಸ್ಥಳಾಂತರಿಸಲು ತೀರ್ಮಾನಿಸಿದೆ. ಆದ್ದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಪಸಂಮೀ 237 ಪಅವಿ 2010, ಬೆಂಗಳೂರು, ದಿನಾಂಕ: 15ನೇ ಏಪ್ರಿಲ್ 2011.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ವಿಷಯವನ್ನು ಕೂಲಂಕಷವಾಗಿ ಪರಶೀಲಿಸದ ಸರ್ಕಾರ, ಜಾನುವಾರು ಚಿಕಿತ್ಸೆ ಹಾಗೂ ರೈತಾಪಿ ವರ್ಗದ ಹಿತದೃಷ್ಟಿಯಿಂದ ಜಾನುವಾರು ಸಂವರ್ಧನಾ ಮತ್ತು ತರಬೇತಿ ಕೇಂದ್ರ, ಕೋಯ್ಲಾ, ಪುತ್ತೂರು ತಾಲ್ಲೂಕು, ದಕ್ಷಿಣ ಕನ್ನಡ ಜಿಲ್ಲೆ ಅಧೀನದ ವೀರ್ಯ ಸಂಕಲನಾ ಕೇಂದ್ರ ಶಾಖೆಗೆ ಮಂಜೂರಾಗಿರುವ ಎರಡು ಪಶುವೈದ್ಯಕೀಯ ಮೇಲ್ವಿಚಾರಕರ ಹುದ್ದೆಗಳ ಪೈಕಿ ಒಂದು ಪಶುವೈದ್ಯಕೀಯ ಮೇಲ್ವಿಚಾರಕರ ಹುದ್ದೆಯನ್ನು ಲೆಕ್ಕಶೀರ್ಷಿಕೆ 2403-00-800-0-23 (ಯೋಜನೇತರ ಸಮೇತ ಪಶು ಆಸ್ಪತ್ರೆ, ಮೂಡಬಿದ್ರಿ, ಮಂಗಳೂರು ತಾಲ್ಲೂಕು, ದಕ್ಷಿಣ ಕನ್ನಡ ಜಿಲ್ಲೆ ಇಲ್ಲಿಗೆ ಸ್ಥಳಾಂತರಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಪಿ.ನಾಗರಾಜ**

ಪಿ.ಆರ್.1181

ಪೀಠಾಧಿಕಾರಿ-2

ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ (ಪಶುಸಂಗೋಪನೆ-ಎ)

## ಸಹಕಾರ ಸಚಿವಾಲಯ

**ವಿಷಯ :** ಕಂದಾಯ ಇಲಾಖಾ ನೌಕರರ ವಸತಿ ಸಹಕಾರ ಸಂಘ ನಿ., ಶಿವಮೊಗ್ಗ ಇದರ 2009-10ನೇ ಸಾಲಿನ ವಾರ್ಷಿಕ ಮಹಾಸಭೆಯನ್ನು ನಡೆಸಲು ಕಾಲಾವಧಿ ವಿಸ್ತರಿಸುವ ಬಗ್ಗೆ.

**ಓದಲಾಗಿದೆ:** 1. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ಉಪವಿಭಾಗ, ಶಿವಮೊಗ್ಗ ಇವರ ಪತ್ರ ಸಂಖ್ಯೆ:ಸನಿ24/ಮಾರಾಟ/ಜಿಬಿಎಂ/ಸಿಆರ್ 90/2010-11, 512, ದಿನಾಂಕ:13-9-2010

2. ಅಧ್ಯಕ್ಷರು, ಕಂದಾಯ ಇಲಾಖಾ ನೌಕರರ ವಸತಿ ಸಹಕಾರ ಸಂಘ ನಿ., ಶಿವಮೊಗ್ಗ ಇವರ ಪತ್ರ ಸಂಖ್ಯೆ: 195/2010-11, ದಿನಾಂಕ:26-02-2011

**ಪ್ರಸ್ತಾವನೆ :**

2009-10ನೇ ಸಾಲಿನ ವಾರ್ಷಿಕ ಮಹಾಸಭೆಯನ್ನು ಮಾರ್ಚ್ 2011ರ ಅಂತ್ಯದೊಳಗೆ ನಡೆಸಲು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ಉಪವಿಭಾಗ, ಶಿವಮೊಗ್ಗ ಇವರ ಮೇಲೆ ಓದಲಾದ (1)ರ ಆದೇಶದಲ್ಲಿ ಅನುಮತಿಯನ್ನು ನೀಡಿರುತ್ತಾರೆ. ಮುಂದುವರೆದು ಸಂಘದ ಅಧ್ಯಕ್ಷರು, ಮೇಲೆ ಓದಲಾದ (2)ರ ಪತ್ರದಲ್ಲಿ 2009-10ನೇ ಸಾಲಿನ ಮಹಾಸಭೆಯನ್ನು ನಡೆಸಲು ಸಂಘದ ಕೆಲಸ ಹಾಗೂ ಸರ್ಕಾರಿ ಕೆಲಸ ಕಾರ್ಯಗಳ ನಡುವೆ ನಡೆಸಲು ಸಾಧ್ಯವಾಗುವುದಿಲ್ಲವೆಂದು ತಿಳಿಸಿ ಸೆಪ್ಟೆಂಬರ್ 2011ರೊಳಗಾಗಿ ನಡೆಸಲು ಅನುಮತಿ ಕೋರಿರುತ್ತಾರೆ.

ಸರ್ಕಾರವು ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಒ 63 ಸಿಎಲ್ಎಂ 2011, ಬೆಂಗಳೂರು, ದಿನಾಂಕ: 15ನೇ ಏಪ್ರಿಲ್ 2011.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 121ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಕಂದಾಯ ಇಲಾಖಾ ನೌಕರರ ವಸತಿ ಸಹಕಾರ ಸಂಘ ನಿ., ಶಿವಮೊಗ್ಗ ಇದರ 2009-10ನೇ ಸಾಲಿನ ವಾರ್ಷಿಕ ಮಹಾಸಭೆಯನ್ನು ನಡೆಸಲು ದಿನಾಂಕ 30-09-2011ರವರೆಗೆ ಕಾಲಾವಕಾಶ ನೀಡಲು ಅನುವಾಗುವಂತೆ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 27 ಸದರಿ ಸಂಸ್ಥೆಗೆ ಕೆಳಗಿನ ಮಾರ್ಪಾಟಿನೊಂದಿಗೆ ಅನ್ವಯವಾಗುತ್ತದೆಂದು ನಿರ್ದೇಶಿಸುತ್ತದೆ ಎಂದರೆ:

**27ರ ಪ್ರಕರಣದಲ್ಲಿ:**

27ನೇ ಪ್ರಕರಣ ಉಪಪ್ರಕರಣ (1)ರ ಪರಂತುಕದಲ್ಲಿನ "ಆರು ತಿಂಗಳು" ಎಂಬ ಪದಗಳಿಗೆ ಬದಲಾಗಿ "ಹನ್ನೆರಡು ತಿಂಗಳು" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**ಸೂಚನೆ:**

ಪ್ರಕರಣ 27(1)ಕ್ಕೆ ಮಾಡಿದ ಈ ಮಾರ್ಪಾಡು ದಿನಾಂಕ:30-9-2011 ರವರೆಗೆ ಜಾರಿಯಲ್ಲಿರತಕ್ಕದ್ದು. ಈ ಅವಧಿ ಮುಗಿದ ನಂತರ ಈ ಆದೇಶದ ಮಾರ್ಪಾಡಿಗೆ ಮೊದಲು ಜಾರಿಯಲ್ಲಿದ್ದಂತೆ ಸದರಿ ಪ್ರಕರಣ 27(1)ರ ಉಪಬಂಧಗಳು ಪುನ: ಜಾರಿಗೆ ಬರತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಎಸ್. ಸರೋಜಮ್ಮ**

ಪಿ.ಆರ್.1182

ಸರ್ಕಾರದ ಅಧೀನ ಕಾರ್ಯದರ್ಶಿ,

ಸಹಕಾರ ಇಲಾಖೆ.

## HOME SECRETARIAT

**Sub :** Constitution of State level and District level committees for identification and destruction of Illicit Opium/Poppy cultivation-reg.,

**Read :** 1) Letter No. F.No. VII/1/8/2010/Int. Dated:15-11-2011 of Director General, Narcotics Control Bureau (Ministry of Home Affairs), New Delhi.

2) Letter No.11/CRM/CA/COD/2009, dated 16-3-2011 of Director General of Police, C.I.D., Traing special Units and Economic Offences, Bangalore.

**Preamble:**

The Director Genral, Narcotics Control Bureau (Ministry of Home Affairs), New Delhi in his letter under reference (1) above has requested the States for Constitution of State level and District level committees for identification and destruction of Illicit Opium/Poppy cultivation.

Accordingly, the Director General of Police, C.I.D., Training, Special Units and Economic Offences, Bangalore has sent a proposal for constitution of State level and District level committees for identification and destruction of Illicit Opium/Poppy cultivation vide his letter under reference cited (2) above.

The mater has been examined. Hence the following order.

**Government Order No. HD 02 PND 2009, Bangalore, Dated 23rd April 2011**

Government is pleased to constitute the following State Level Committee and District Level Committees for identification and destruction of Illicit Opium/Poppy cultivation in the state.

2. The State Level Committee will consists of the following:

| | | | |
|---|---|---|---|
| 1. | The Deputy Inspector General of Police, Economic Offences and Nodal Officer, C.I.D. Bangalore | : | Chairman |
| 2. | The Commissioner for Excise, Bangalore | : | Member Secretary |
| 3. | The Chief Conservator of Forest, Aranya Bhavan, Bangalore | : | Member |
| 4. | The Assistant Director, S.I.B., Cauvery Bhavan, Bangalore | : | Member |
| 5 | The Zonal Director,<br>Narcotics Control Bureau, 7/1 & 2, Priyanka Vilas, Ramanna Garden, Katigenahalli, Bagalur Main Road, PO:Air Force Station, Yelahanka, Bangalore-560 063 | : | Member |
| 6. | The Deputy Secretary to Government, Revenue Department (Services), M.S.Building, Bangalore | : | Member |

3. In respect of Committees constituted in respect of all the District of the State will consist of the following Officers at each District level.

4. District Level Committees:

| | | | |
|---|---|---|---|
| 1. | The Deputy Commissioner of the concerned District | : | Chairman |
| 2. | The Deputy Commissioner of Police of the concerned District | : | Co-Chairman |
| 3 | The Deputy Excise Commissioner of the concerned District | : | Member Secretary |
| 4 | The District Forest Officer of the concerned District | : | Member |

5. However, in repect of Bangalore Urban District, the composition of the Committee is as follows:

| | | | |
|---|---|---|---|
| 1. | The Deputy Commissioner, Bangalore Urban District, Bangalore | : | Chairman |
| 2. | The Deputy Commission of Police (Crimes), Bangalore City | : | Co-Chairman |
| 3 | The Deputy Excise Commissioner, Bangalore Urban District, Bangalore | : | Member Secretary |
| 4 | The District Forest Officer, Bangalore Urban District, Bangalore | : | Member |

6. It is hereby directed that the State Level Committee shall meet once every 3 months to draw an plan of action for identification and destruction of Illicit Opium/Poppy cultivation in the State and give proper instructions to District Level committees in this regard.

7. The District Level Committee will periodically hold the meetings and carry out the instructions issued by State Level Committee and form special squads and collect the information for identification and destruction of Illicit Opium/Poppy cultivation in their respective districts and a compliance report to be sent to the Nodal officer and Chairman i.e., the Deputy Inspector General of Police, Economic Offences and Nodal Officer, C.I.D., Bangalore as well as Secretary of the State Level Committee.

By order and in the name of the Governor of Karnataka,

**K.C.SIDDAPPA**
Under Secretary to Government,
Home Department
(Law & Order, COFEPOSA & Prosecutions)

PR.1183

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಹೆಚ್.ಎನ್. ಬಾಲಕೃಷ್ಣ, ಪಿ.ಎಸ್.ಐ., ಮಂಡ್ಯ ಗ್ರಾಮಾಂತರ ಪೊಲೀಸ್ ಠಾಣೆ, ಮಂಡ್ಯ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ

**ಓದಲಾಗಿದೆ:**
1. ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಮಂಡ್ಯ ಜಿಲ್ಲೆ, ಇವರ ಆದೇಶ ಸಂಖ್ಯೆ:ಸಿಬ್ಬಂದಿ(2)/ಡಿಇ/04/2009–10 (ಓ.ಬಿ. 309/2009–10) ದಿನಾಂಕ:7–1–2010
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ದಕ್ಷಿಣ ವಲಯ, ಮೈಸೂರು, ಇವರ ಆದೇಶ ಸಂಖ್ಯೆ:ಅಪೀಲು/74/2009–10(ಓ.ಬಿ.10/2010–11) ದಿನಾಂಕ:24–6–2010.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:25–10–2010
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)65/2010–11, ದಿನಾಂಕ:17–01–2011

**ಪ್ರಸ್ತಾವನೆ :**

ಶ್ರೀ ಹೆಚ್.ಎನ್. ಬಾಲಕೃಷ್ಣ, ಪಿ.ಎಸ್.ಐ. ಇವರು ಶ್ರೀರಂಗಪಟ್ಟಣ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯದಲ್ಲಿ ಅತೀವ ದುರ್ನಡತೆ, ಅಶಿಸ್ತು ಮತ್ತು ನಿರ್ಲಕ್ಷತೆ ಪ್ರದರ್ಶಿಸಿದ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 6 ರಡಿ ಇಲಾಖಾ ವಿಚಾರಣೆಗೆ ಆದೇಶಿಸಿ, ಈ ಕೆಳಕಂಡ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:**

"ಶ್ರೀ ಹೆಚ್.ಎನ್. ಬಾಲಕೃಷ್ಣ, ಪಿ.ಎಸ್.ಐ., ಆದ ನೀವು ಶ್ರೀರಂಗಪಟ್ಟಣ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಸಮಯದಲ್ಲಿ ದಿ:09–06–2009ರಂದು ರಾತ್ರಿ ಸುಮಾರು 11.30 ಗಂಟೆಯಲ್ಲಿ ರಾಮನಗರ ಡಿಪೋಗೆ ಸಂಬಂಧಪಟ್ಟ ಕೆ.ಎಸ್.ಆರ್.ಟಿ.ಸಿ. ಬಸ್ ನಿರ್ವಾಹಕಿಯಾಗಿ ಕರ್ತವ್ಯ ನಿರ್ವಹಿಸುತ್ತಿದ್ದ ಬಿಲ್ಲೆ ನಂ. 1132, ಎಂ. ಸುಜಾತ ರವರು ಶ್ರೀರಂಗಪಟ್ಟಣ ಪೊಲೀಸ್ ಠಾಣೆಗೆ ಹಾಜರಾಗಿ ನೀಡಿದ ದೂರಿನ ಸಾರಾಂಶವೇನೆಂದರೆ ಬಸ್ಸಿನಲ್ಲಿ ಸೀಟಿಗಾಗಿ ಇಬ್ಬರು ಪ್ರಯಾಣಿಕರು ಜಗಳ ಮಾಡುತ್ತಿದ್ದಾಗ ನಿರ್ವಾಹಕಿ ಈ ಬಗ್ಗೆ ಮಧ್ಯ ಪ್ರವೇಶಿಸಿ ಸಮಾಧಾನಪಡಿಸಲು ಹೋದ ಬಸ್ ನಿರ್ವಾಹಕಿ ಎಂ.ಸುಜಾತ ರವರನ್ನು ಬಸ್ಸಿನಲ್ಲಿ ಸೀಟಿಗಾಗಿ ಗಲಾಟೆ ಮಾಡುತ್ತಿದ್ದ ಶ್ರೀರಂಗಪಟ್ಟಣದ ವಾಸಿಯಾದ ವೆಂಕೋಬರಾವ್‌ಸಿಂಧ್ಯಾ ಎಂಬುವರು ಆಕೆಗೆ ಅವಾಚ್ಯ ಶಬ್ದಗಳಿಂದ ಬೈದು ಕಪಾಲಕ್ಕೆ ಹೊಡೆದಿರುವುದಾಗಿ ನೀಡಿದ ಲಿಖಿತ ದೂರಿನ ಅಂಶವು ಸಂಜ್ಞೇಯ ಅಪರಾದವಾಗಿದ್ದರೂ ಸಹ ದೂರನ್ನು ಸ್ವೀಕರಿಸಿ ಎನ್.ಸಿ.ಆರ್. ನಂ.92/2009ರಲ್ಲಿ ನಮೂದಿಸಿರುತ್ತೀರಿ.

ನೀವು ಒಬ್ಬ ಜವಾಬ್ದಾರಿಯುತ ಠಾಣಾಧಿಕಾರಿಯಾಗಿದ್ದು, ದಿ:9–6–2009ರಂದು ರಾತ್ರಿ 11.30 ಗಂಟೆಗೆ ಅರ್ಜಿದಾರರಾದ ಕೆ.ಎಸ್.ಆರ್.ಟಿ.ಸಿ. ಬಸ್‌ನ ನಿರ್ವಾಹಕಿ ಎಂ.ಸುಜಾತ, ಬಿಲ್ಲೆ ನಂ. 1132, ರವರು ಠಾಣೆಗೆ ಹಾಜರಾಗಿ ವೆಂಕೋಬ್‌ರಾವ್‌ಸಿಂಧ್ಯಾ ಎಂಬುವವರು ಅವಾಚ್ಯ ಶಬ್ದಗಳಿಂದ ಬೈದು ಕಪಾಲಕ್ಕೆ ಹೊಡೆದಿರ್ತಾರೆಂದು ನೀಡಿರುವ ದೂರು ಸಂಜ್ಞೇಯ ಅಪರಾಧವಾಗಿದ್ದು ವೆಂಕೋಬ್‌ರಾವ್‌ಸಿಂಧ್ಯಾ ರವರ ವಿರುದ್ಧ ಅಪರಾಧ ಪ್ರಕರಣವನ್ನು ದಾಖಲಿಸದೆ ಸದರಿ ಫಿರ್ಯಾದನ್ನು ಅಸಂಜ್ಞೆಯ ಅಪರಾಧವೆಂದು ಪರಿಗಣಿಸಿ ಠಾಣಾ ಎನ್.ಸಿ.ಆರ್. ನಂ.92/09ರಲ್ಲಿ ನೊಂದಾಯಿಸಿಕೊಂಡು, ಘಟನೆಯ ಬಗ್ಗೆ ವಿಚಾರಣೆ ನಡೆಸಿ ಫಿರ್ಯಾದಿಯ ಮುಂದುವರೆದ ಹೇಳಿಕೆಯನ್ನು ಪಡೆಯದೆ, ಅರ್ಜಿದಾರರಿಗೆ ಹಿಂಬರಹವನ್ನು ನೀಡದೆ ಪ್ರಕರಣದ ಹಾದಿಯನ್ನು ದಿಕ್ಕು ತಪ್ಪಿಸಿ ನಿಮ್ಮ ಕರ್ತವ್ಯದಲ್ಲಿ ಅತೀವ ನಿರ್ಲಕ್ಷ್ಯತೆ ಪ್ರದರ್ಶಿಸಿರುತ್ತೀರಿ.

ಶ್ರೀ ಹೆಚ್.ಎನ್. ಬಾಲಕೃಷ್ಣ, ಪಿ.ಎಸ್.ಐ ಆದ ನೀವು ಶ್ರೀರಂಗಪಟ್ಟಣ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಸಮಯದಲ್ಲಿ ದಿನಾಂಕ:9–6–2009ರಂದು ಶ್ರೀ ಎಸ್. ಶಕ್ತಿಪ್ರಸಾದ್, ವಕೀಲರಿಗೆ ತಮ್ಮ ಕಕ್ಷಿದಾರರಾದ ವೆಂಕೋಬ್‌ರಾವ್‌ಸಿಂಧ್ಯಾ ಎಂಬುವವರು ತಮಗೆ ದೂರವಾಣಿ ಕರೆ ಮಾಡಿದರೆಂದು ರಾತ್ರಿ ಸುಮಾರು 11:45 ಗಂಟೆಯಲ್ಲಿ ಶ್ರೀರಂಗಪಟ್ಟಣ ಠಾಣೆಗೆ ಬಂದು ನಾನು ಒಬ್ಬ ವಕೀಲನೆಂದು ನಿಮ್ಮಲ್ಲಿ ಪರಿಚಯಿಸಿಕೊಂಡು, ಗಲಾಟೆಯ ಸಂಬಂಧ ಠಾಣೆಯ ಪಿ.ಎಸ್.ಐ. ಆದ ನಿಮ್ಮೊಂದಿಗೆ ಮಾತನಾಡಿದಾಗ ಅವರನ್ನು ನೀವು ಏಕವಚನದಲ್ಲಿ ನಿಂದಿಸಿ, ಲಾಠಿ ಹಾಗೂ ಕೈಯಿಂದ ತಲೆ ಹಾಗೂ ಮೈ–ಕೈ ಮೇಲೆ ಹೊಡೆದು ಹಲ್ಲೆ ನಡೆಸಿರುತ್ತಿರೆಂದು ಹಾಗೂ ಅಸಭ್ಯವಾಗಿ ನಡೆದುಕೊಂಡು, ಕೆಲ ಸಮಯ ಸೆಲ್‌ನಲ್ಲಿ ಕೂಡಿ ಹಾಕಿರುತ್ತೀರೆಂದು, ಒಬ್ಬ ಕಕ್ಷಿದಾರನ ಪರ ಮಾತನಾಡಲು ಠಾಣೆಗೆ ಬಂದ ವಕೀಲರ ಮೇಲೆ ಹಲ್ಲೆ ನಡೆಸುವಷ್ಟು ಉದ್ದಟತನ ತೋರಿರುತ್ತಾರೆಂದು, ಇವರ ಮೇಲೆ ಕಾನೂನು ರೀತ್ಯಾ ಕ್ರಮ ಜರುಗಿಸಬೇಕೆಂದು ಶ್ರೀರಂಗಪಟ್ಟಣ ಉಪ–ವಿಭಾಗದ ಡಿ.ವೈ.ಎಸ್.ಪಿ., ಶ್ರೀ ಲಾರೆನ್ಸ್ ರವರಿಗೆ ಶ್ರೀ ಎಸ್.ಶಕ್ತಿಪ್ರಸಾದ್ ಬಿನ್ ಸತ್ಯರಾಜ್, ವಕೀಲರು, ಅಂಚೆ ಕಛೇರಿ ರಸ್ತೆ, ಶ್ರೀರಂಗಪಟ್ಟಣ ರವರು ನೀಡಿದ ದೂರನ್ನು ಡಿ.ವೈ.ಎಸ್.ಪಿ., ಶ್ರೀರಂಗಪಟ್ಟಣ ರವರು ಸ್ವೀಕರಿಸಿಕೊಂಡು ಕೇಸು ದಾಖಲಿಸುವಂತೆ ಶ್ರೀರಂಗಪಟ್ಟಣ ಠಾಣೆಗೆ ಕಳುಹಿಸಿಕೊಟ್ಟ ಮೇರೆಗೆ ಶ್ರೀರಂಗಪಟ್ಟಣ ಪೊಲೀಸ್ ಠಾಣಾ ಎ.ಎಸ್.ಐ. ಶ್ರೀ ಎಂ.ಎಸ್. ಸಿದ್ಧರಾಜು ರವರು ಠಾಣಾ ಮೊ.ನಂ.287/2009 ಕಲಂ 342, 324, 504 ಐಪಿಸಿ ರೀತ್ಯಾ ಕೇಸು ದಾಖಲಿಸಿರುತ್ತಾರೆ.

ನೀವು ಶ್ರೀರಂಗಪಟ್ಟಣ ಠಾಣೆಗೆ ತನ್ನ ಕಕ್ಷಿದಾರರಾದ ವೆಂಕೋಬ್‌ರಾವ್‌ಸಿಂಧ್ಯಾ ರವರ ಪರವಾಗಿ ಬಂದ ವಕೀಲರಾದ ಶ್ರೀ ಎಸ್. ಶಕ್ತಿಪ್ರಸಾದ್ ರವರೊಂದಿಗೆ ಅನುಚಿತವಾಗಿ ವರ್ತಿಸಿರುತ್ತೀರಿ. ಈ ಕಾರಣಕ್ಕಾಗಿ ವಕೀಲರುಗಳು, ಶ್ರೀರಂಗಪಟ್ಟಣದ ನ್ಯಾಯಾಲಯದಲ್ಲಿ ನಡೆಯುತ್ತಿದ್ದ ನ್ಯಾಯಾಲಯದ ಕಲಾಪಗಳನ್ನು ಬಹಿಷ್ಕರಿಸಿ, ಶ್ರೀ ರಂಗಪಟ್ಟಣ ಪೊಲೀಸ್ ಠಾಣೆಯ ಮುಂದೆ ಗುಂಪು ಸೇರಿ ಗಲಾಟೆ ಮಾಡಲು ನೀವು ಪರೋಕ್ಷವಾಗಿ ಕಾರಣರಾಗಿರುವುದಿಲ್ಲದೇ ಕಾನೂನು–ಸುವ್ಯವಸ್ಥೆಗೆ ಭಂಗ ಉಂಟುಮಾಡುತ್ತೀರಿ. ನೀವು ಕೇಂದ್ರ ಸ್ಥಾನದಲ್ಲೇ ಇರುವ ಶ್ರೀರಂಗಪಟ್ಟಣ ವೃತ್ತ ನಿರೀಕ್ಷಕರಿಗಾಗಲೀ ಅಥವಾ ಡಿ.ವೈ.ಎಸ್.ಪಿ., ರವರಿಗಾಗಲೀ ಈ ಘಟನೆಯ ಬಗ್ಗೆ ತಿಳಿಸದೆ ಇಲಾಖೆಯ ಪ್ರತಿಷ್ಠೆಗೆ ಧಕ್ಕೆ ತರುವುದರ ಮೂಲಕ ನೀವು ನಿಮ್ಮ ಕರ್ತವ್ಯದಲ್ಲಿ ಅತೀವ ದುರ್ನಡತೆ, ಅಶಿಸ್ತು ಮತ್ತು ನಿರ್ಲಕ್ಷ್ಯತೆ ಪ್ರದರ್ಶಿಸಿರುತ್ತೀರಿ ಎಂದು ಆರೋಪ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಇವರ ವಿರುದ್ಧದ ಆರೋಪವು ಭಾಗಶಃ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತುಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಮಂಡ್ಯ ಜಿಲ್ಲೆ, ಇವರು ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ದಿನಾಂಕ:07-01-2010ರ ಆದೇಶದಲ್ಲಿ ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಒಂದು ವರ್ಷ ಕಾಲ ನಂತರದ ವಾರ್ಷಿಕ ವೇತನ ಬಡ್ತಿಯ ಮೇಲೆ ಪರಿಣಾಮ ಬೀರದಂತೆ ಮುಂದೂಡಲಾಗಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ದಕ್ಷಿಣ ವಲಯ, ಮೈಸೂರು, ಇವರ ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ:24–6–2010ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣೆ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಸದರಿ ಪರಿಷ್ಕರಣೆ ಮೇಲ್ಮನವಿ ಅರ್ಜಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಹೊಸ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷ್ಯತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವಾದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 161 ಪೊಸಿಅ 2010, ಬೆಂಗಳೂರು, ದಿನಾಂಕ: 20ನೇ ಏಪ್ರಿಲ್ 2011.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಹೆಚ್.ಎನ್. ಬಾಲಕೃಷ್ಣ, ಪಿ.ಎಸ್.ಐ., ಮಂಡ್ಯ ಗ್ರಾಮಾಂತರ ಪೊಲೀಸ್ ಠಾಣೆ, ಮಂಡ್ಯ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣೆ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1184

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಎ.ಸಿ. ಲೋಕೇಶ, ಪಿ.ಎಸ್.ಐ., ಕೆಸ್ತೂರು ಪೊಲೀಸ್ ಠಾಣೆ, ಮಂಡ್ಯ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ

**ಓದಲಾಗಿದೆ:**
1. ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ದಕ್ಷಿಣ ವಲಯ, ಮೈಸೂರು ಇವರ ಆದೇಶ ಸಂಖ್ಯೆ: ಇವಿ/42/2008–09 (ಓ.ಬಿ. 28/2009–10) ದಿ:19–3–2010.
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಡಿ.ಜಿ. ಮತ್ತು ಐ.ಜಿ.ಪಿ. ಬೆಂಗಳೂರು ಇವರ ಆದೇಶ ಸಂಖ್ಯೆ: ಅಪೀಲು (4)/17/2010–11 (ಓ.ಬಿ. 19/2010–11) ದಿನಾಂಕ:19–8–2010.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:28–9–2010
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)62/2010–11, ದಿನಾಂಕ:25–11–2010

**ಪ್ರಸ್ತಾವನೆ :**

ಶ್ರೀ ಎ.ಸಿ. ಲೊಕೇಶ್, ಪಿ.ಎಸ್.ಐ., ಕೆಸ್ತೂರು ಪೊಲೀಸ್ ಠಾಣೆ, ಇವರು ಮದ್ದೂರು ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯದಲ್ಲಿ ಅತೀವ ನಿರ್ಲಕ್ಷ್ಯತನ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿದ ಕಾರಣದ ಮೇಲೆ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 6 ರಡಿ ಇಲಾಖಾ ವಿಚಾರಣೆಗೆ ಆದೇಶಿಸಿ, ಈ ಕೆಳಕಂಡ ದೋಷಾರೋಪಣೆಯನ್ನು ಹೊರಿಸಲಾಗಿದೆ.

ದೋಷಾರೋಪಣೆ:

**ದೋಷಾರೋಪಣೆ:**

1. ಆ.ಪೊ.ಅ. ಆದ ನೀವು ಮದ್ದೂರು ಪೊಲೀಸ್ ಠಾಣೆಯಲ್ಲಿ ಪಿ.ಎಸ್.ಐ. (ಕಾನೂನು ಮತ್ತು ಸುವ್ಯವಸ್ಥೆ) ಆಗಿ ಕರ್ತವ್ಯ ನಿರ್ವಹಿಸುತ್ತಿದ್ದೀರಿ. ಮದ್ದೂರು ಪೊಲೀಸ್ ಠಾಣೆಯ ಮೊಕದ್ದಮೆ ಸಂಖ್ಯೆ:469/2008 ಕಲಂ 279, 337 ಭಾರತ ದಂಡ ಸಹಿತೆ, ರೆ:ವಿ 134(ಎ) ಮತ್ತು (ಬಿ) ಐ.ಎಂ.ವಿ. ಆಕ್ಟ್ ಪ್ರಕರಣದಲ್ಲಿ ದಿನಾಂಕ: 9–10–2008ರಂದು ಅರ್ಜಿದಾರರಾದ ಶ್ರೀ ಲಕ್ಷ್ಮೀನಾರಾಯಣ ಮಿಶ್ರ ರವರು ಅಪಘಾತಕ್ಕೆ ಸಂಬಂಧಿಸಿದ ಇನ್ನೋವಾ ಕಾರನ್ನು ತಮ್ಮ ವಶಕ್ಕೆ ನೀಡಿ, ಅಪಘಾತ ನಡೆದ ಬಗ್ಗೆ ದೂರನ್ನು ನೀಡಿದಾಗ ದೂರಿನಲ್ಲಿ ಅಪಘಾತಕ್ಕೆ ಸಂಬಂಧಿಸಿದ ದ್ವಿಚಕ್ರ ವಾಹನದ ನೋಂದಣಿ ಸಂಖ್ಯೆ ಇಲ್ಲವೆಂದು ದೂರನ್ನು ಸ್ವೀಕರಿಸದೇ ನಿರಾಕರಿಸಿರುತ್ತೀರಿ. ನಂತರ ಮದ್ದೂರು ಸರ್ಕಾರಿ ಆಸ್ಪತ್ರೆಯಿಂದ ಬಂದ ಎಂ.ಎಲ್.ಸಿ. ಮೆಮೋ ಸ್ವೀಕರಿಸಿದ ನಂತರ ಆಸ್ಪತ್ರೆಗೆ ತೆರಳಿ ಗಾಯಾಳುವಿನ ಹೇಳಿಕೆಯನ್ನು ಪಡೆದು ಪ್ರಕರಣವನ್ನು ದಾಖಲಿಸದೇ ಕರ್ತವ್ಯದಲ್ಲಿ ಅತೀವ ನಿರ್ಲಕ್ಷತನ ತೋರಿರುತ್ತೀರಿ. ನಂತರ ಗಾಯಾಳುವನ್ನು ಹೆಚ್ಚಿನ ಚಿಕಿತ್ಸೆಗಾಗಿ ಬೆಂಗಳೂರಿನ ವಿಕ್ಟೋರಿಯಾ ಆಸ್ಪತ್ರೆಗೆ

ದಾಖಲಿಸಿರುತ್ತಾರೆ. ಇದರ ಬಗ್ಗೆಯೂ ಸಹ ಮಾಹಿತಿ ಸಂಗ್ರಹಿಸಿ ಬೆಂಗಳೂರಿಗೆ ತೆರಳಿ ಗಾಯಾಳುವಿನ ಹೇಳಿಕೆಯನ್ನು ಪಡೆಯದೇ ಕರ್ತವ್ಯದಲ್ಲಿ ಅತೀವ ನಿರ್ಲಕ್ಷತೆ ಹಾಗೂ ಬೇಜವಾಬ್ದಾರಿತನವನ್ನು ತೋರಿರುತ್ತೀರಿ.

2. ಎಂ.ಎಲ್.ಸಿ. ಮೆಮೋ ಬಂದಿದ್ದರೂ ಸಹ ಅಪಘಾತಕ್ಕೆ ಸಂಬಂಧಿಸಿದಂತೆ ಹೇಳಿಕೆ ಅಥವಾ ದೂರು ಅರ್ಜಿಯನ್ನು ಪಡೆದು ಪ್ರಕರಣ ದಾಖಲಿಸದೆ ಎರಡು ದಿನ ತಡಮಾಡಿ ಪ್ರಕರಣದ ದಾಖಲಿಸಿದ್ದು, ಮೇಲಿನ ಘಟನೆಯಲ್ಲಿ ಮೂರನೆಯ ವ್ಯಕ್ತಿ ಅರ್ಜಿದಾರರ ವಿರುದ್ಧ ದೂರು ನೀಡಿದಾಗ ದುರುದ್ದೇಶದಿಂದ ದೂರು ತೆಗೆದುಕೊಂಡು ಪ್ರಥಮ ವರ್ತಮಾನ ವರದಿಯನ್ನು ದಾಖಲಿಸಿದ್ದು, ಈ ವ್ಯಾಪ್ತಿಯ ಒಬ್ಬ ಜವಾಬ್ದಾರಿಯುತ ಠಾಣಾಧಿಕಾರಿಯಾದ ನೀವು ಉದ್ದೇಶಪೂರ್ವಕವಾಗಿ ದೂರನ್ನು ಸ್ವೀಕರಿಸದೆ, ಎರಡು ದಿನಗಳ ನಂತರ ತಡಮಾಡಿ ಪ್ರಕರಣ ದಾಖಲಿಸಿ ನಿಮ್ಮ ಕರ್ತವ್ಯದಲ್ಲಿ ನಿರ್ಲಕ್ಷತನ, ಬೇಜವಾಬ್ದಾರಿಯನ್ನು ಎಸಗಿರುತ್ತೀರಿ.

ಎಂದು ನಿಮ್ಮ ಮೇಲೆ ಅತೀವ ಅಶಿಸ್ತು ಮತ್ತು ಕರ್ತವ್ಯಲೋಪ ತೋರ್ಪಡಿಸಿರುತ್ತೀರೆಂದು ದೋಷಾರೋಪಣೆ ಹೊರಡಿಸಲಾಗಿದೆ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬಿತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತುಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ದಕ್ಷಿಣ ವಲಯ, ಮೈಸೂರು, ಇವರು ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ದಿನಾಂಕ: 19–3–2010ರ ಆದೇಶದಲ್ಲಿ ಅರ್ಜಿದಾರರ ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗಳ ಮೇಲೆ ಪರಣಾಮವಾಗುವ ರೀತಿಯಲ್ಲಿ 6 ತಿಂಗಳ ಕಾಲ ಮುಂದೂಡಲಾಗಿದೆ. ದಿನಾಂಕ: 23–11–2008 ರಿಂದ 04–12–2008ರ ವರೆಗಿನ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೆ ಪರಿಗಣಿಸಲಾಗಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಡಿ.ಜಿ. ಮತ್ತು ಐ.ಜಿ.ಪಿ. ಬೆಂಗಳೂರು, ಇವರ ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ದಿನಾಂಕ:19–08–2010ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನು, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಸದರಿ ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಹೊಸ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವಾದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 154 ಪೊಸಿಅ 2010, ಬೆಂಗಳೂರು, ದಿನಾಂಕ: 20ನೇ ಏಪ್ರಿಲ್ 2011.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎ.ಸಿ. ಲೋಕೇಶ, ಪಿ.ಎಸ್.ಐ., ಕೆಸ್ತೂರು ಪೊಲೀಸ್ ಠಾಣೆ, ಮಂಡ್ಯ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣೆ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಎನ್. ರವಿಪ್ರಕಾಶ್**

ಪಿ.ಆರ್. 1185 ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ :** **ಬೆಳಗಾವಿ ಜಿಲ್ಲೆ ಅಥಣಿ ತಾಲ್ಲೂಕಿನ ಆಡಹಳ್ಳಿ ಗ್ರಾಮದ ಹತ್ತಿರ** ಹಿರೇಹಳ್ಳಕ್ಕೆ ಅಡ್ಡಲಾಗಿ ಬ್ಯಾರೇಜ್ ನಿರ್ಮಾಣ ಕಾಮಗಾರಿಯ ಅನುಮೋದಿಸುವ ಕುರಿತು.

**ಓದಲಾಗಿದೆ :** 1) ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರರವರ ಪತ್ರದ ಕ್ರಮಾಂಕ: ಮುಇಂ/ಸನೀ(ಉ) ವಲಯ/ಬಿಜೆಪಿ/ಎಇ–1/2011–12/2110 ದಿನಾಂಕ 18–04–2011.

2) ಸರ್ಕಾರದ ಆದೇಶ ಸಂಖ್ಯೆ ಸನೀಇ 236 ಮಸಾವಿ 2009(1) ದಿನಾಂಕ 09–07–2010.

**ಪ್ರಸ್ತಾವನೆ :**

ಬೆಳಗಾವಿ ಜಿಲ್ಲೆ ಅಥಣಿ ತಾಲ್ಲೂಕಿನ ಆಡಹಳ್ಳಿ ಗ್ರಾಮದ ಹತ್ತಿರ ಹಿರೇಹಳ್ಳಕ್ಕೆ ಅಡ್ಡಲಾಗಿ ಬ್ಯಾರೇಜ್ ನಿರ್ಮಾಣ ಕಾಮಗಾರಿಯ ಅಂದಾಜಿಗೆ ಉಲ್ಲೇಖ (2) ನಮೂದಿಸಿರುವ ಸರ್ಕಾರದ ಆದೇಶದಲ್ಲಿ ಆಡಳಿತಾತ್ಮಕ ಅನುಮೋದನೆ ನೀಡಲಾಗಿದ್ದು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರರವರು ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ. ಈ ಕಾಮಗಾರಿಯನ್ನು ಎ.ಐ.ಬಿ.ಪಿ. ಕಾರ್ಯಕ್ರಮದಡಿ ಕೈಗೊಳ್ಳಲು ಭಾರತ ಸಕಾರದ ಅನುಮೋದನೆ ದೊರಕಿರುತ್ತದೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಬೆಳಗಾವಿ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಇ–ಪ್ರೊಕ್ಯೂರ್‌ಮೆಂಟ್ ಮೂಲಕ ಕರೆಯಲಾದ ಅಲ್ಪಾವಧಿ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ಜಿಲ್ಲಾ ಟೆಂಡರ್ ಬುಲೆಟಿನ್ | 08–11–2010 |
| ವಿಜಯ ಕರ್ನಾಟಕ | 13–11–2010 |
| ಕನ್ನಡ ಪ್ರಭ | 13–11–2010 |
| ಡೆಕ್ಕನ್ ಹೆರಾಲ್ಡ್ | 13–11–2010 |

ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ಮೂರು ಜನ ಗುತ್ತಿಗೆದಾರರು ಭಾಗವಹಿಸಿದ್ದು ಇವರಲ್ಲಿ ಇಬ್ಬರು ಗುತ್ತಿಗೆದಾರರು ಮಾತ್ರ ಅರ್ಹತೆ ಹೊಂದಿದ್ದು, ಇವರ ಆರ್ಥಿಕ ಬಿಡ್‌ಅನ್ನು ದಿನಾಂಕ 11-01-2011 ರಂದು ತೆರೆದು ಪರಿಶೀಲಿಸಲಾಗಿದ್ದು ವಿವರಗಳು ಕೆಳಕಂಡಂತಿವೆ.

| | |
|---|---|
| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | ರೂ. 70,73,694/- |
| ಪ್ರಸಕ್ತ ಸಾಲಿನ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗೆ ಇಡಲಾದ ಮೊತ್ತ | ರೂ. 82,55,260/- |

| ಕ್ರಮ ಸಂಖ್ಯೆ | ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ ಹಾಗೂ | ಪರಿಷ್ಕರಿಸಿದ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ ಕಡಿಮೆ |
|---|---|---|---|---|
| **1** | ವೀರೇಶ್‌ಕುಮಾರ್ ಹೆಬ್ಬಾಳ್ ಪ್ರಥಮ ದರ್ಜೆ ಗುತ್ತಿಗೆದಾರರು | 88,66,104/- | 25.339 ಹೆಚ್ಚು | 7.399 ಹೆಚ್ಚು |
| **2** | ಮಲ್ಲಿಕಾರ್ಜುನ ನೀಲಕಂಠ ಮದಾರಿ, ಪ್ರಥಮ ದರ್ಜೆ ಗುತ್ತಿಗೆದಾರರು | 88,98,760/- | 25.80 ಹೆಚ್ಚು | 7.80 ಹೆಚ್ಚು |

ಮೇಲ್ಕಂಡಂತೆ ಶ್ರೀ ವೀರೇಶ್‌ಕುಮಾರ್ ಹೆಬ್ಬಾಳ್, ಒಂದನೇ ದರ್ಜೆ ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ಅತ್ಯಂತ ಕಡಿಮೆ ದರಗಳನ್ನು ನಮೂದಿಸಿರುವ ಅರ್ಹತೆ ಹೊಂದಿರುವ ಗುತ್ತಿಗೆದಾರರಾಗಿದ್ದು ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 7.399 ರಷ್ಟು ಹೆಚ್ಚಾಗಿದ್ದು, ಸದರಿಯವರ ಟೆಂಡರ್‌ನ್ನು ಸಂದಾನದ ಮೂಲಕ ಅಂಗೀಕರಿಸಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಮೇಲೆ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

ಈ ಟೆಂಡರನ್ನು ಸರ್ಕಾರದಲ್ಲಿ ಪರಿಶೀಲಿಸಿ ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತ ರೂ. 82,55,260 / ಗಳ ಮೇಲೆ ಶೇ. 7.30 ರಷ್ಟು ಹೆಚ್ಚಿನ ದರಗಳಲ್ಲಿ ಅಂದರೆ ರೂ. 88,57,893/- ಗಳಿಗೆ ಅನುಮೋದಿಸಲು ಪರಿಗಣಿಸಿದೆ.

ಮೇಲಿನ ಅಂಶಗಳ ಹಿನ್ನೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸನೀಇ 29 ಅಪಿಬಂ 2011 (ತಾಂತ್ರಿಕ) , ಬೆಂಗಳೂರು, ದಿನಾಂಕ : 09ನೇ ಮೇ-2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬೆಳಗಾವಿ ಜಿಲ್ಲೆ ಅಥಣಿ ತಾಲ್ಲೂಕಿನ ಅಡಹಳ್ಳಿ ಗ್ರಾಮದ ಹತ್ತಿರ ಹಿರೇಹಳ್ಳಕ್ಕೆ ಅಡ್ಡಲಾಗಿ ಬ್ಯಾರೇಜ್ ನಿರ್ಮಾಣ ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದ ಟೆಂಡರಿಗಿಡಲಾದ ಮೊತ್ತ ರೂ. 82,55,260/- ಗಳ ಮೇಲೆ ಶೇ. 7.30 ರಷ್ಟು ಹೆಚ್ಚಿನ ದರಗಳಲ್ಲಿ ಅಂದರೆ ರೂ. 88,57,893/- ಗಳಿಗೆ (ರೂ. ಎಂಬತ್ತೆಂಟು ಲಕ್ಷ ಐವತ್ತೇಳು ಸಾವಿರದ ಎಂಟು ನೂರ ತೊಂಭತ್ತಮೂರು) ಶ್ರೀ ವೀರೇಶ್‌ಕುಮಾರ್ ಹೆಬ್ಬಾಳ್ ಒಂದನೇ ದರ್ಜೆ ಗುತ್ತಿಗೆದಾರರುರವರಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗದಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ: 20/01/2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**(ರುದ್ರಮೂರ್ತಿ)**

ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 1304 ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ :** ಬೆಳಗಾವಿ ಜಿಲ್ಲೆ ಹುಕ್ಕೇರಿ ತಾಲ್ಲೂಕಿನ ಶೆಟ್ಟಿಹಳ್ಳಿ ಗ್ರಾಮದ ಹತ್ತಿರ ಘಟಪ್ರಭಾ ನದಿಗೆ ಅಡ್ಡಲಾಗಿ ಬ್ರಿಡ್ಜ್ ಕಂ ಬ್ಯಾರೇಜ್ ನಿರ್ಮಾಣ ಕಾಮಗಾರಿಯ ಟೆಂಡರ್ ಅನುಮೋದಿಸುವ ಕುರಿತು.

**ಓದಲಾಗಿದೆ :** **1)** ಮುಖ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರವರ ಪತ್ರದ ಕ್ರಮಾಂಕ: ಮುಇಂ/ಸನೀ (ಉ) ವಲಯ/ಬಿಜೆಪಿ/ಎಇ-1/2011-12/1966 ದಿನಾಂಕ 06-04-2011.

**2)** ಸರ್ಕಾರದ ಆದೇಶ ಸಂಖ್ಯೆ ಸನೀಇ 236 ಮಸಾವಿ 2009(3) ದಿನಾಂಕ 09/07/2010

**ಪ್ರಸ್ತಾವನೆ :**

ಬೆಳಗಾವಿ ಜಿಲ್ಲೆ ಹುಕ್ಕೇರಿ ತಾಲ್ಲೂಕಿನ ಶೆಟ್ಟಿಹಳ್ಳಿ ಗ್ರಾಮದ ಹತ್ತಿರ ಘಟಪ್ರಭಾ ನದಿಗೆ ಅಡ್ಡಲಾಗಿ ಬ್ರಿಡ್ಜ್ ಕಂ ಬ್ಯಾರೇಜ್ ನಿರ್ಮಾಣ ಕಾಮಗಾರಿಯ ಅಂದಾಜಿಗೆ ಉಲ್ಲೇಖ (2) ರಲ್ಲಿ ನಮೂದಿಸಿರುವ ಸರ್ಕಾರದ ಆದೇಶದಲ್ಲಿ ಆಡಳಿತಾತ್ಮಕ ಅನುಮೋದನೆ ನೀಡಲಾಗಿದ್ದು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರರವರು ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ. ಈ ಕಾಮಗಾರಿಯನ್ನು ಎ.ಐ.ಬಿ.ಪಿ. ಕಾರ್ಯಕ್ರಮದಡಿ ಕೈಗೊಳ್ಳಲು ಭಾರತ ಸರ್ಕಾರದ ಅನುಮೋದನೆ ದೊರಕಿರುತ್ತದೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಬೆಳಗಾವಿ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಇ-ಪ್ರೊಕ್ಯೂರ್‌ಮೆಂಟ್ ಮೂಲಕ ಕರೆಯಲಾದ ಅಲ್ಪಾವಧಿ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ರಾಜ್ಯ ಟೆಂಡರ್ ಬುಲೆಟಿನ್ | 25–11–2010 |
| ಜಿಲ್ಲಾ ಟೆಂಡರ್ ಬುಲೆಟಿನ್ | 22–11–2010 |
| ಸಂಯುಕ್ತ ಕರ್ನಾಟಕ ದಿನಪತ್ರಿಕೆ | 13–11–2010 |
| ಕನ್ನಡ ಪ್ರಭ ದಿನಪತ್ರಿಕೆ | 13–11–2010 |
| ಡೆಕ್ಕನ್ ಹೆರಾಲ್ಡ್ ಆಂಗ್ಲ ದಿನಪತ್ರಿಕೆ | 12–11–2010 |

ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ಇಬ್ಬರು ಗುತ್ತಿಗೆದಾರರು ಭಾಗವಹಿಸಿದ್ದು ಈ ಪೈಕಿ ಒಬ್ಬರು ಗುತ್ತಿಗೆದಾರರು ಮಾತ್ರ ಅರ್ಹತೆ ಹೊಂದಿದ್ದು, ಇವರ ಆರ್ಥಿಕ ಬಿಡ್‌ಅನ್ನು ದಿನಾಂಕ 22–12–2010 ರಂದು ತೆರೆದು ಪರಿಶೀಲಿಸಲಾಗಿದ್ದು ವಿವರಗಳು ಕೆಳಕಂಡಂತಿವೆ.

| | | | | |
|---|---|---|---|---|
| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | | | ರೂ. 1,59,22,229/– | |
| ಪ್ರಸಕ್ತ ಸಾಲಿನ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗೆ ಇಡಲಾದ ಮೊತ್ತ | | | ರೂ. 1,85,88,763/– | |
| ಕ್ರಮ ಸಂಖ್ಯೆ | ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ ಹಾಗೂ | ಪರಿಷ್ಕರಿಸಿದ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ ಕಡಿಮೆ |
| 1 | ಜೈಶೀಲ ನಾರಾಯಣ ಶೆಟ್ಟಿ ಪ್ರಥಮ ದರ್ಜೆ ಗುತ್ತಿಗೆದಾರರು | 2,30,91,325/– | 45.03 ಹೆಚ್ಚು | 24.22 ಹೆಚ್ಚು |

ಮೇಲ್ಕಂಡಂತೆ ಶ್ರೀ ಜೈಶೀಲ ನಾರಾಯಣ ಶೆಟ್ಟಿ, ಒಂದನೇ ದರ್ಜೆ ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ಅರ್ಹತೆ ಹೊಂದಿರುವ ಗುತ್ತಿಗೆದಾರರಾಗಿದ್ದು ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 24.22 ರಷ್ಟು ಹೆಚ್ಚಾಗಿದ್ದು, ಸದರಿಯವರ ಟೆಂಡರ್‌ನ್ನು ಸಂಧಾನದ ಮೂಲಕ ಅಂಗೀಕರಿಸಲು ಮುಖ್ಯ ಇಂಜಿನಿಯರ್ ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಮೇಲೆ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

ಗುತ್ತಿಗೆದಾರರು ದಿನಾಂಕ 23–04–2011 ರಂದು ಪತ್ರವನ್ನು ನೀಡಿ ಪರಿಷ್ಕೃತ ದರಗಳ ಮೇಲೆ ಶೇ. 9.00 ರಷ್ಟು ಹೆಚ್ಚಿನ ದರದಲ್ಲಿ ಕಾಮಾಗಾರಿಯನ್ನು ನಿರ್ವಹಿಸುವುದಾಗಿ ತಿಳಿಸಿರುತ್ತಾರೆ. ಈ ಟೆಂಡರನ್ನು ಸರ್ಕಾರದಲ್ಲಿ ಪರಿಶೀಲಿಸಿ ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತ ರೂ. 1,85,88,763/– ಗಳ ಮೇಲೆ ಶೇ. 7.50 ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 1,99,82,920/– ಗಳಿಗೆ ಅನುಮೋದಿಸಲು ಪರಿಗಣಿಸಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸನೀಇ 24 ಅಪಿಬಂ 2011, (ತಾಂತ್ರಿಕ) ಬೆಂಗಳೂರು, ದಿನಾಂಕ : 10–05–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬೆಳಗಾವಿ ಜಿಲ್ಲೆ ಹುಕ್ಕೇರಿ ತಾಲ್ಲೂಕಿನ ಶೆಟ್ಟಹಳ್ಳಿ ಗ್ರಾಮದ ಹತ್ತಿರ ಘಟಪ್ರಭಾ ನದಿಗೆ ಅಡ್ಡಲಾಗಿ ಬ್ರಿಡ್ಜ್ ಕಂ ಬ್ಯಾರೇಜ್ ನಿರ್ಮಾಣ ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದ ಟೆಂಡರಿಗಿಡಲಾದ ಮೊತ್ತ ರೂ. 1,85,88,763/– ಗಳ ಮೇಲೆ ಶೇ. 7.50 ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 1,99,82,920/– ಗಳಿಗೆ (ರೂ. ಒಂದು ಕೋಟಿ ತೊಂಭತ್ತೊಂಭತ್ತು ಲಕ್ಷ ಎಂಭತ್ತೆರಡು ಸಾವಿರದ ಒಂಭೈನೂರು ಇಪ್ಪತ್ತು) ಶ್ರೀ ಜೈಶೀಲ ನಾರಾಯಣ ಶೆಟ್ಟಿ, ಒಂದನೇ ದರ್ಜೆ ಗುತ್ತಿಗೆದಾರರು ರವರಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗದಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಾಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ: 20/01/2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ರುದ್ರಮೂರ್ತಿ**

ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ

ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

ಪಿ.ಆರ್. 1305

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ :** ಬೆಳಗಾವಿ ಜಿಲ್ಲೆ ಅಥಣಿ ತಾಲ್ಲೂಕಿನ ಅಗ್ರಾಣಿ ಇಂಗಳಗಾಂವ ಗ್ರಾಮದ ಹತ್ತಿರ ಅಗ್ರಾಣಿ ಹಳ್ಳಕ್ಕೆ ಅಡ್ಡಲಾಗಿ ಬ್ಯಾರೇಜ್ ನಿರ್ಮಾಣ ಕಾಮಗಾರಿಯ ಅನುಮೋದಿಸುವ ಕುರಿತು.

**ಓದಲಾಗಿದೆ :** 1) ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರವರ ಪತ್ರದ ಕ್ರಮಾಂಕ: ಮುಇಂ/ಸನೀ (ಉ) ವಲಯ/ಬಿಜೆಪಿ/ಎಇ–1/2011–12/2228.

2) ಸರ್ಕಾರದ ಆದೇಶ ಸಂಖ್ಯೆ ಸನೀಇ 236 ಮಸಾವಿ 2009(2) ದಿನಾಂಕ 09/07/2010

**ಪ್ರಸ್ತಾವನೆ :**

ಬೆಳಗಾವಿ ಜಿಲ್ಲೆ ಅಥಣಿ ತಾಲ್ಲೂಕಿನ ಅಗ್ರಾಣಿ ಇಂಗಳಗಾಂವ ಗ್ರಾಮದ ಹತ್ತಿರ ಅಗ್ರಾಣಿ ಹಳ್ಳಕ್ಕೆ ಅಡ್ಡಲಾಗಿ ಬ್ಯಾರೇಜ್ ನಿರ್ಮಾಣ ಕಾಮಗಾರಿಯ ಅಂದಾಜಿಗೆ ಉಲ್ಲೇಖ (2) ರಲ್ಲಿ ನಮೂದಿಸಿರುವ ಸರ್ಕಾರದ ಆದೇಶದಲ್ಲಿ ಆಡಳಿತಾತ್ಮಕ ಅನುಮೋದನೆ ನೀಡಲಾಗಿದ್ದು ಮುಖ್ಯ

ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರರವರು ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ. ಈ ಕಾಮಗಾರಿಯನ್ನು ಎ.ಐ.ಬಿ.ಪಿ. ಕಾರ್ಯಕ್ರಮದಡಿ ಕೈಗೊಳ್ಳಲು ಭಾರತ ಸಕಾರದ ಅನುಮೋದನೆ ದೊರಕಿರುತ್ತದೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಬೆಳಗಾವಿ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಇ–ಪ್ರೊಕ್ಯೂರ್‌ಮೆಂಟ್ ಮೂಲಕ ಕರೆಯಲಾದ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ರಾಜ್ಯ ಟೆಂಡರ್ ಬುಲೆಟಿನ್ | 30–10–2010ಮತ್ತು<br>25–11–2010 |
| ಜಿಲ್ಲಾ ಟೆಂಡರ್ ಬುಲೆಟಿನ್ | 02–11–2010 ಮತ್ತು<br>22–11–2010 |

ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ಮೂರು ಜನ ಗುತ್ತಿಗೆದಾರರು ಭಾಗವಹಿಸಿದ್ದು ಇವರು ಅರ್ಹತೆ ಹೊಂದಿದ್ದು, ಇವರ ಆರ್ಥಿಕ ಬಿಡ್‌ಅನ್ನು ದಿನಾಂಕ 08–04–2011 ರಂದು ತೆರೆದು ಪರಿಶೀಲಿಸಲಾಗಿದ್ದು ವಿವರಗಳು ಕೆಳಕಂಡಂತಿವೆ.

| | | | | |
|---|---|---|---|---|
| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | | | | ರೂ. 1,43,54,945/– |
| ಪಸಕ್ತ ಸಾಲಿನ ದರಗಳನ್ನು ಪರಿಗಣಿಸಿ ಟೆಂಡರಿಗೆ ಇಡಲಾದ ಮೊತ್ತ | | | | ರೂ. 1,65,93,361/– |
| ಕ್ರಮ ಸಂಖ್ಯೆ | ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ ಹಾಗೂ | ಪರಿಷ್ಕರಿಸಿದ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ ಕಡಿಮೆ |
| 1 | ವಿ.ಎಂ. ಹೆಬ್ಬಾಳ ಪ್ರಥಮ ದರ್ಜೆ ಗುತ್ತಿಗೆದಾರರು | 1,75,34,723/– | 22.15 ಹೆಚ್ಚು | 5.67 ಹೆಚ್ಚು |
| 2. | ಎಸ್.ಆರ್. ಕಪ್ಪಲಗುದ್ದಿ, ಪ್ರಥಮ ದರ್ಜೆ ಗುತ್ತಿಗೆದಾರರು | 1,91,14,509/– | 33.16 ಹೆಚ್ಚು | 15.19 ಹೆಚ್ಚು |
| 3. | ಸಿ.ಕೆ. ಒಂಟಗೋಡಿ, ಪ್ರಥಮ ದರ್ಜೆ ಗುತ್ತಿಗೆದಾರರು | 1,85,26,978/– | 29.06 ಹೆಚ್ಚು | 11.65 ಹೆಚ್ಚು |

ಮೇಲ್ಕಂಡಂತೆ ಶ್ರೀ ವಿ.ಎಂ. ಹೆಬ್ಬಾಳ, ಒಂದನೇ ದರ್ಜೆ ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ಅತ್ಯಂತ ಕಡಿಮೆ ದರಗಳನ್ನು ನಮೂದಿಸಿರುವ ಅರ್ಹತೆ ಹೊಂದಿರುವ ಗುತ್ತಿಗೆದಾರರಾಗಿದ್ದು ಇವರು ನಮೂದಿಸಿದ ದರಗಳನ್ನು ಪ್ರಸಕ್ತ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 5.67 ರಷ್ಟು ಹೆಚ್ಚಾಗಿದ್ದು, ಸದರಿಯವರ ಟೆಂಡರ್‌ನ್ನು ಸಂದಾನದ ಮೂಲಕ ಅಂಗೀಕರಿಸಲು ಮುಖ್ಯ ಇಂಜಿನೀಯರ್ ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಮೇಲೆ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

ಈ ಟೆಂಡರನ್ನು ಸರ್ಕಾರದಲ್ಲಿ ಪರಿಶೀಲಿಸಿ ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತ ರೂ. 1,65,93,361/– ಗಳ ಮೇಲೆ ಶೇ. 5.67 ರಷ್ಟು ಹೆಚ್ಚಿನ ದರಗಳಲ್ಲಿ ಅಂದರೆ ರೂ. 1,75,34,723/– ಗಳಿಗೆ ಅನುಮೋದಿಸಲು ಪರಿಗಣಿಸಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸನೀಇ 37 ಅಪಿಬಂ 2011, (ತಾಂತ್ರಿಕ) ಬೆಂಗಳೂರು, ದಿನಾಂಕ : 10–05–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬೆಳಗಾವಿ ಜಿಲ್ಲೆ ಅಥಣಿ ತಾಲ್ಲೂಕಿನ ಅಗ್ರಾಣಿ ಇಂಗಳಗಾಂವ ಗ್ರಾಮದ ಹತ್ತಿರ ಅಗ್ರಾಣಿ ಹಳ್ಳಕ್ಕೆ ಅಡ್ಡಲಾಗಿ ಬ್ಯಾರೇಜ್ ನಿರ್ಮಾಣ ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದ ಟೆಂಡರಿಗಿಡಲಾದ ಮೊತ್ತ ರೂ. 1,65,93,361/– ಗಳ ಮೇಲೆ ಶೇ. 5.67 ರಷ್ಟು ಹೆಚ್ಚಿನ ದರಗಳಲ್ಲಿ ಅಂದರೆ ರೂ. 1,75,34,723/– ಗಳಿಗೆ (ರೂ. ಒಂದು ಕೋಟಿ ಎಪ್ಪತ್ತೈದು ಲಕ್ಷ ಮೂವತ್ತನಾಲ್ಕು ಸಾವಿರದ ಏಳು ನೂರ ಇಪ್ಪತ್ತಮೂರು) ಶ್ರೀ ವಿ.ಎಂ. ಹೆಬ್ಬಾಳ, ಒಂದನೇ ದರ್ಜೆ ಗುತ್ತಿಗೆದಾರರುರವರಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗದಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಾಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ: 20/01/2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ರುದ್ರಮೂರ್ತಿ**

ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 1306 ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ :** ಬಾಗಲಕೋಟೆ ಜಿಲ್ಲೆಯ ಬೀಳಗಿ ತಾಲ್ಲೂಕಿನ ಬೀಳಗಿ ಕೆರೆಯನ್ನು ಏತ ನೀರಾವರಿ ಯೋಜನೆ ಮೂಲಕ ನೀರು ತುಂಬಿಸುವ ಕಾಮಗಾರಿಯ ಟೆಂಡರ್ ಕಾಮಗಾರಿಯನ್ನು ಅನುಮೋದಿಸುವ ಕುರಿತು.

**ಓದಲಾಗಿದೆ :** **1)** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರವರ ಪತ್ರದ ಕ್ರಮಾಂಕ: ಮುಇಂ/ಸನೀ (ಉ) ವಲಯ/ಬಿಜೆಪಿ/ಎಇ–6/2011–12/2327 ದಿನಾಂಕ 28–04–2011.

**2)** ಸರ್ಕಾರದ ಆದೇಶ ಸಂಖ್ಯೆ ಸನೀಇ 6 ನಯೋಕಾ 2009, ದಿನಾಂಕ 12–04–2010.

**ಪ್ರಸ್ತಾವನೆ :**

ಬಾಗಲಕೋಟೆ ಜಿಲ್ಲೆಯ ಬೀಳಗಿ ತಾಲ್ಲೂಕಿನ ಬೀಳಗಿ ಕೆರೆಯನ್ನು ಏತ ನೀರಾವರಿ ಯೋಜನೆ ಮೂಲಕ ನೀರು ತುಂಬಿಸುವ ಕಾಮಗಾರಿಯ ಅಂದಾಜಿಗೆ ಉಲ್ಲೇಖ (2) ರಲ್ಲಿ ನಮೂದಿಸಿರುವ ಸರ್ಕಾರದ ಆದೇಶದಲ್ಲಿ ಆಡಳಿತಾತ್ಮಕ ಅನುಮೋದನೆ ನೀಡಲಾಗಿದ್ದು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರರವರು ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಬಿಜಾಪುರ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಇ–ಪ್ರೊಕ್ಯೂರ್‌ಮೆಂಟ್ ಮೂಲಕ ಕರೆಯಲಾದ ಅಲ್ಪಾವಧಿ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ರಾಜ್ಯ ಟೆಂಡರ್ ಬುಲೆಟಿನ್ | 28–01–2011 |
| ಕನ್ನಡ ಪ್ರಭ ದಿನಪತ್ರಿಕೆ | 28–01–2011 |
| ಡೆಕ್ಕನ್ ಹೆರಲ್ಡ್ ಆಂಗ್ಲ ದಿನಪತ್ರಿಕೆ | 28–01–2011 |

ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ಇಬ್ಬರು ಗುತ್ತಿಗೆದಾರರು ಭಾಗವಹಿಸಿದ್ದು ಈ ಪೈಕಿ ಒಬ್ಬರು ಗುತ್ತಿಗೆದಾರರು ಮಾತ್ರ ಅರ್ಹತೆ ಹೊಂದಿದ್ದು, ಇವರ ಆರ್ಥಿಕ ಬಿಡ್‌ಅನ್ನು ದಿನಾಂಕ 03–03–2011 ರಂದು ತೆರೆದು ಪರಿಶಿಲಿಸಲಾಗಿದ್ದು ವಿವರಗಳು ಕೆಳಕಂಡಂತಿವೆ.

| | |
|---|---|
| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | ರೂ. 1,96,89,891/– |
| ಪ್ರಸಕ್ತ ಸಾಲಿನ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗೆ ಇಡಲಾದ ಮೊತ್ತ | ರೂ. 3,52,05,272/– |

| ಕ್ರಮ ಸಂಖ್ಯೆ | ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ ಹಾಗೂ | ಪರಿಷ್ಕರಿಸಿದ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ ಕಡಿಮೆ |
|---|---|---|---|---|
| 1 | ಮೆ.ಟಾಪಿ ಪ್ರಿಸ್ಟ್ರೆಸ್ಡ್ ಪ್ರಾಡಕ್ಟ್ಸ್ ಲಿಮಿಟೆಡ್ ಪ್ರಥಮ ದರ್ಜೆ ಗುತ್ತಿಗೆದಾರರು | 3,54,38,007/– | 79.98 ಹೆಚ್ಚು | 0.66 ಹೆಚ್ಚು |

ಮೇಲ್ಕಂಡಂತೆ ಶ್ರೀ ಮೆ.ಟಾಪಿ ಪ್ರಿಸ್ಟ್ರೆಸ್ಡ್ ಪ್ರಾಡಕ್ಟ್ಸ್ ಲಿಮಿಟೆಡ್, ಒಂದನೇ ದರ್ಜೆ ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ಅರ್ಹತೆ ಹೊಂದಿರುವ ಗುತ್ತಿಗೆದಾರರಾಗಿದ್ದು ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 0.66ರಷ್ಟು ಹೆಚ್ಚಾಗಿದ್ದು, ಸದರಿಯವರ ಟೆಂಡರ್‌ನ್ನು ಅಂಗೀಕರಿಸಲು ಮುಖ್ಯ ಇಂಜಿನೀಯರ್ ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಮೇಲೆ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

ಈ ಟೆಂಡರನ್ನು ಸರ್ಕಾರದಲ್ಲಿ ಪರಿಶೀಲಿಸಿ ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತ ರೂ. 3,52,05,272/– ಗಳ ಮೇಲೆ ಶೇ. 0.66ರಷ್ಟು ಹೆಚ್ಚಿನ ದರಗಳಲ್ಲಿ ಅಂದರೆ ರೂ. 3,54,38,007/– ಗಳಿಗೆ ಅನುಮೋದಿಸಲು ಪರಿಗಣಿಸಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸನೀಇ 19 ಏನೀಯೋ 2011 (ತಾಂತ್ರಿಕ), ಬೆಂಗಳೂರು, ದಿನಾಂಕ : 10–05–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬಾಗಲಕೋಟೆ ಜಿಲ್ಲೆ ಬೀಳಗಿ ತಾಲ್ಲೂಕಿನ ಬೀಳಗಿ ಕೆರೆಯನ್ನು ಏತ ನೀರಾವರಿ ಯೋಜನೆ ಮೂಲಕ ನೀರು ತುಂಬಿಸುವ ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದ ಟೆಂಡರಿಗಿಡಲಾದ ಮೊತ್ತ ರೂ. 3,52,05,272/– ಗಳ ಮೇಲೆ ಶೇ. 0.66ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 3,54,38,007/– ಗಳಿಗೆ (ರೂ. ಮೂರು ಕೋಟಿ ಐವತ್ತುನಾಲ್ಕು ಲಕ್ಷ ಮೂವತ್ತೆಂಟು ಸಾವಿರದ ಏಳು) ಮೆ. .ಟಾಪಿ ಪ್ರಿಸ್ಟ್ರೆಸ್ಡ್ ಪ್ರಾಡಕ್ಟ್ಸ್ ಲಿಮಿಟೆಡ್, ಒಂದನೇ ದರ್ಜೆ ಗುತ್ತಿಗೆದಾರರುರವರಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಾಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ: 20/01/2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ರುದ್ರಮೂರ್ತಿ**

ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ

ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

ಪಿ.ಆರ್. 1307

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ :** ಚಿಕ್ಕಬಳ್ಳಾಪುರ ಜಿಲ್ಲೆಯ ಚಿಂತಾಮಣಿ ತಾಲ್ಲೂಕಿನ ಹುಲುಗುಮ್ಮನಹಳ್ಳಿ ಹತ್ತಿರ ತಗಳವಾರ ಅಮಾನಿ ಕೆರೆಗೆ ಬರುವ ಪೋಷಕ ಕಾಲುವೆಗೆ ಅಡ್ಡಲಾಗಿ ಚೆಕ್ ಡ್ಯಾಂ ನಿರ್ಮಾಣ ಕಾಮಗಾರಿಯ ಟೆಂಡರ್ ಕುರಿತು.

**ಓದಲಾಗಿದೆ :** 1) ಸರ್ಕಾರದ ಆದೇಶ ಸಂಖ್ಯೆ ಸನೀಇ 236 ಮಸಾವಿ 2009(1), ದಿನಾಂಕ: 06–07–2010.

2) ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ ಬೆಂಗಳೂರುರವರ ಪತ್ರದ ಸಂಖ್ಯೆ: ಮುಸ(ದ)/ತಾಂ.3/ಸಇಂ–5/ಕೋಲಾರ/ತಳಗವಾರ/ಇ–ಟೆಂಡರ್/2011/1819, ದಿನಾಂಕ 20–04–2011.

**ಪ್ರಸ್ತಾವನೆ :**

ಮೇಲೆ (1) ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಭಾರತ ಸರ್ಕಾರದ ನೆರವಿನ ಎ.ಐ.ಬಿ.ಪಿ. ಕಾರ್ಯಕ್ರಮದಡಿ ಒಟ್ಟು ರೂ. 500.00 ಲಕ್ಷ ಅಂದಾಜು ಮೊತ್ತದ 14 ಕಾಮಗಾರಿಗಳ ಅಂದಾಜುಗಳಿಗೆ ಆಡಳಿತಾತ್ಮಕ ಅನುಮೋದನೆ ನೀಡಿದ್ದು, ಈ ಪೈಕಿ ಚಿಕ್ಕಬಳ್ಳಾಪುರ ಜಿಲ್ಲೆ, ಚಿಂತಾಮಣಿ ತಾಲ್ಲೂಕಿನ ಹುಲುಗುಮ್ಮನಹಳ್ಳಿ ಹತ್ತಿರ ತಗಳವಾರ ಅಮಾನಿ ಕೆರೆಗೆ ಬರುವ ಪೋಷಕ ಕಾಲುವೆಗೆ ಅಡ್ಡಲಾಗಿ ಚೆಕ್ ಡ್ಯಾಂ ನಿರ್ಮಾಣ ಕಾಮಗಾರಿಯು ಒಂದಾಗಿದ್ದು ಮುಖ್ಯ ಇಂಜಿನಿಯರ್ ಸಣ್ಣ ನೀರಾವರಿ ದಕ್ಷಿಣ ಬೆಂಗಳೂರುರವರ ಸಿ.ಇ.ಆರ್. ಸಂಖ್ಯೆ 121/2010–11 ದಿನಾಂಕ 03–01–2011 ರಲ್ಲಿ ರೂ. 60.00 ಲಕ್ಷ ಮೊತ್ತದ ಅಂದಾಜಿಗೆ ತಾಂತ್ರಿಕ ಮಂಜೂರಾತಿ ನೀಡಲಾಗಿದೆ. ಈ ಕಾಮಗಾರಿ ಕೈಗೊಳ್ಳಲು ಭಾರತ ಸರ್ಕಾರದ ಅನುಮೋದನೆ ದೊರಕಿದೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಕೋಲಾರ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಇ–ಪ್ರೊಕ್ಯೂರ್‌ಮೆಂಟ್ ಮೂಲಕ ಕರೆಯಲಾದ ಅಲ್ಪಾವಧಿ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ಚಿಕ್ಕಬಳ್ಳಾಪುರ ಜಿಲ್ಲಾ ಟೆಂಡರ್ ಬುಲೆಟಿನ್ | 06–12–2010 |
| ಪ್ರಜಾವಾಣಿ ಹಾಗೂ ಡೆಕ್ಕನ್ ಹೆರಾಲ್ಡ್ ದಿನಪತ್ರಿಕೆ | 26–11–2010 |

ತಾಂತ್ರಿಕ ಬಿಡ್‌ಗಳನ್ನು ದಿನಾಂಕ 02–02–2011 ರಂದು ತೆರೆದು ಪರಿಶೀಲಿಸಲಾಗಿ, ಇಬ್ಬರು ಗುತ್ತಿಗೆದಾರರು ಇ–ಪ್ರೊಕ್ಯೂರ್‌ಮೆಂಟ್ ಮುಖಾಂತರ ದ್ವಿಲಕೋಟೆ ಪದ್ಧತಿಯಲ್ಲಿ ಟೆಂಡರ್‌ಗಳನ್ನು ಸಲ್ಲಿಸಿದ್ದು ಒಬ್ಬ ಗುತ್ತಿಗೆದಾರರ ಟೆಂಡರ್ ಮಾತ್ರ ಕ್ರಮಬದ್ಧವಾದ ಕಾರಣ ಇವರ ಆರ್ಥಿಕ ಬಿಡ್ ಅನ್ನು ದಿನಾಂಕ 07–02–2011 ರಂದು ತೆರೆದಿದ್ದು ವಿವರಗಳು ಕೆಳಕಂಡಂತಿವೆ.

| | |
|---|---|
| ಮಂಜೂರಾದ ಅಂದಾಜಿನ ದರಗಳಂತೆ ಹಾಗೂ ಪ್ರಸಕ್ತ ಚಾಲ್ತಿಯಲ್ಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗೆ ಇಡಲಾದ ಮೊತ್ತ | ರೂ. 59,66,340/– |

| ಕ್ರಮ ಸಂಖ್ಯೆ | ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಹಾಗೂ ಪ್ರಸಕ್ತ ಚಾಲ್ತಿಯಲ್ಲಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ |
|---|---|---|---|
| 1 | ಎಸ್. ಬಸವರಾಜು 1ನೇ ದರ್ಜೆ ಗುತ್ತಿಗೆದಾರರು ತುಮಕೂರು | 63,58,405/– | 6.57 ಹೆಚ್ಚು |

ಮೇಲ್ಕಂಡಂತೆ ಶ್ರೀ ಎಸ್. ಬಸವರಾಜು ಒಂದನೇ ದರ್ಜೆ ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 6.57ರಷ್ಟು ಹೆಚ್ಚಾಗಿದ್ದು, ಸದರಿಯವರ ಟೆಂಡರ್‌ನ್ನು ಅನುಮೋದಿಸಲು ಮುಖ್ಯ ಇಂಜಿನಿಯರ್ ಸಣ್ಣ ನೀರಾವರಿ (ದಕ್ಷಿಣ) ವಲಯ, ಬೆಂಗಳೂರು ಇವರು ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

ಗುತ್ತಿಗೆದಾರರ ದಿನಾಂಕ 26–04–2011ರ ಪತ್ರದಲ್ಲಿ ಸದರಿ ಕಾಮಗಾರಿಯು ತುಂಬಾ ಕಷ್ಟಕರವಾಗಿದ್ದು ಕಾಮಗಾರಿಗೆ ಸಾಮಗ್ರಿಗಳನ್ನು ಸಾಗಿಸಲು ಸರಿಯಾದ ರಸ್ತೆ ಸಂಪರ್ಕ ಇಲ್ಲದಿರುವುದರಿಂದ ಹಾಗೂ ಕಚ್ಚಾ ಸಾಮಗ್ರಿಗಳ ಹಾಗೂ ಕೂಲಿ ಕಾರ್ಮಿಕರ ಭತ್ಯೆಯಲ್ಲಿ ಸಾಕಷ್ಟು ಹೆಚ್ಚಳವಾಗಿರುವುದರಿಂದ ಅವರು ನಮೂದಿಸಿರುವ ದರಗಳು ಅತ್ಯಂತ ಕಡಿಮೆಯಾಗಿದ್ದು ಈ ದರಗಳಿಗೆ ಟೆಂಡರ್ ಅನುಮೋದಿಸಲು ಕೋರಿರುತ್ತಾರೆ. ಗುತ್ತಿಗೆದಾರರು ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಈ ಕಾಮಗಾರಿಯ ಟೆಂಡರ್‌ನ್ನು ಪರಿಷ್ಕೃತ ದರಗಳ ಮೇಲೆ ಶೇ. 6.50% ಹೆಚ್ಚಿನ ದರಗಳಿಗೆ ಅಂದರೆ ರೂ. 63,54,152/–ಗಳಿಗೆ ಅನುಮೋದಿಸಲು ಪರಿಗಣಿಸಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸನೀಇ 35 ಅಪಿಬಂ (ತಾಂತ್ರಿಕ) 2011, ಬೆಂಗಳೂರು, ದಿನಾಂಕ : 10–05–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಚಿಕ್ಕಬಳ್ಳಾಪುರ ಜಿಲ್ಲೆ ಚಿಂತಾಮಣಿ ತಾಲ್ಲೂಕಿನ ಹುಲುಗುಮ್ಮನಹಳ್ಳಿ ಹತ್ತಿರ ತಗಳವಾರ ಅಮಾನಿ ಕೆರೆಗೆ ಬರುವ ಪೋಷಕ ಕಾಲುವೆಗೆ ಅಡ್ಡಲಾಗಿ ಚೆಕ್ ಡ್ಯಾಂ ನಿರ್ಮಾಣ ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತ ರೂ. 59,66,340/– ಗಳ ಮೇಲೆ ಶೇ. 6.50ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 63,54,152/– ಗಳಿಗೆ (ರೂ. ಅರವತ್ತಮೂರು ಲಕ್ಷ ಐವತ್ತನಾಲ್ಕು ಸಾವಿರದ ಒಂದು ನೂರಾ ಐವತ್ತೆರಡು ಮಾತ್ರ) ಕಾಮಗಾರಿಯನ್ನು ಶ್ರೀ ಎಸ್. ಬಸವರಾಜು, ಒಂದನೇ ದರ್ಜೆ ಗುತ್ತಿಗೆದಾರರಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.

2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ: 20/01/2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ರುದ್ರಮೂರ್ತಿ**

ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 1308 ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ :** ದಕ್ಷಿಣ ಕನ್ನಡ ಜಿಲ್ಲೆ, ಬೆಳ್ತಂಗಡಿ ತಾಲ್ಲೂಕು, ಗರ್ಡಾಡಿ ಅಚ್ಚಾಡಿ ಎಂಬಲ್ಲಿ ಕಿಂಡಿ ಅಣೆಕಟ್ಟು ಹಾಗೂ ಬ್ಯಾರೇಜ್ ನಿರ್ಮಾಣ ಕಾಮಗಾರಿಯ ಟೆಂಡರ್ ಕುರಿತು.

**ಓದಲಾಗಿದೆ :** 1) ಸರ್ಕಾರದ ಆದೇಶ ಸಂಖ್ಯೆ ಸನೀಇ 14 ಮಸಾವಿ 2009, ದಿನಾಂಕ 25-02-2009.

2) ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ ಬೆಂಗಳೂರುರವರ ಪತ್ರದ ಸಂಖ್ಯೆ:ಮುಸದ/ತಾಂಸ5/ಸ.ಇಂ.11/ದ.ಕ.ಜಿ/ಬೆ.ತಾ/ಗರ್ಡಾಡಿಅಚ್ಚಾಡಿ/ಇ-ಪ್ರೊಕ್ಯೂರ್ಮೆಂಟ್/ ಟೆಂಡರ್ ಅನುಮೋದನೆ/2010/947 ದಿನಾಂಕ 15-02-2011.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ದಕ್ಷಿಣ ಕನ್ನಡ ಜಿಲ್ಲೆ, ಬೆಳ್ತಂಗಡಿ ತಾಲ್ಲೂಕು, ಗರ್ಡಾಡಿ ಅಚ್ಚಾಡಿ ಎಂಬಲ್ಲಿ ಕಿಂಡಿ ಅಣೆಕಟ್ಟು ಹಾಗೂ ಬ್ಯಾರೇಜ್ ನಿರ್ಮಾಣ ಕಾಮಗಾರಿಯ ರೂ. 90.00 ಲಕ್ಷ ಮೊತ್ತದ ಅಂದಾಜಿಗೆ 4702-ಅಣೆಕಟ್ಟು ಮತ್ತು ಪಿಕಪ್-ಪ್ರಧಾನ ಕಾಮಗಾರಿಗಳು ಶೀರ್ಷಿಕೆ ಅಡಿ ಆಡಳಿತಾತ್ಮಕ ಅನುಮೋದನೆ ನೀಡಿದ್ದು, ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ಬೆಂಗಳೂರುರವರ ಸಿ.ಇ.ಆರ್. ಸಂಖ್ಯೆ : 09/2009-10 ದಿನಾಂಕ 03-08-2009ರಲ್ಲಿ ಅಂದಾಜಿಗೆ ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಮಂಗಳೂರು ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಇ-ಪ್ರೊಕ್ಯೂರ್‌ಮೆಂಟ್ ಮೂಲಕ ಕರೆಯಲಾದ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ದಕ್ಷಿಣ ಕನ್ನಡ ಜಿಲ್ಲಾ ಟೆಂಡರ್ ಬುಲೆಟಿನ್ | 28-06-2010 |
| ಪ್ರಜಾವಾಣಿ ಹಾಗೂ ದಿ ಹಿಂದೂ ದಿನಪತ್ರಿಕೆ | 29-06-2010 |

ಟೆಂಡರ್‌ಗಳನ್ನು ದಿನಾಂಕ 10-08-2010 ರಂದು ತೆರೆದು ಪರಿಶೀಲಿಸಲಾಗಿ ಒಬ್ಬ ಗುತ್ತಿಗೆದಾರರು ಮಾತ್ರ ಇ-ಪ್ರೊಕ್ಯೂರ್‌ಮೆಂಟ್ ಮುಖಾಂತರ ದ್ವಿಲಕೋಟೆ ಪದ್ಧತಿಯಲ್ಲಿ ಟೆಂಡರ್‌ಗಳನ್ನು ಸಲ್ಲಿಸಿದ್ದು ಇವರ ಟೆಂಡರ್ ಕ್ರಮಬದ್ಧವಾದ ಕಾರಣ ಇವರ ಆರ್ಥಿಕ ಬಿಡ್ ಅನ್ನು ದಿನಾಂಕ 26-08-2010 ರಂದು ತೆರೆದಿದ್ದು ಇವರ ಟೆಂಡರ್ ವಿವರಗಳು ಕೆಳಕಂಡಂತಿವೆ.

| | |
|---|---|
| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | ರೂ. 88,07,542/- |
| 2010-11ನೇ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗೆ ಇಡಲಾದ ಮೊತ್ತ | ರೂ. 95,85.745/- |

| ಕ್ರಮ ಸಂಖ್ಯೆ | ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ | ಪರಿಷ್ಕರಿಸಿದ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ ಕಡಿಮೆ |
|---|---|---|---|---|
| 1 | ಮೊಹಮ್ಮದ್ ರಫಿ ಕೆ.ಎಂ. 1ನೇ ದರ್ಜೆ ಗುತ್ತಿಗೆದಾರರು, ಮಂಗಳೂರು | 1,12,54,594/- | 27.78 ಹೆಚ್ಚು | 17.409 ಹೆಚ್ಚು |

ಮೇಲ್ಕಂಡಂತೆ ಶ್ರೀ ಮೊಹಮ್ಮದ್ ರಫಿ ಕೆ.ಎಂ. 1ನೇ ದರ್ಜೆ ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 17.409 ರಷ್ಟು ಹೆಚ್ಚಾಗಿದು, ಸದರಿಯವರ ಟೆಂಡರ್‌ನ್ನು ಸಂಧಾನದ ಮೂಲಕ ಅನುಮೋದಿಸಲು ಮುಖ್ಯ ಇಂಜಿನೀಯರ್ ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ಇವರು ಮೇಲೆ (2) ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

ಗುತ್ತಿಗೆದಾರರ ದಿನಾಂಕ 28–04–2011ರ ಪತ್ರದಲ್ಲಿ ಸದರಿ ಕಾಮಗಾರಿಗೆ ಸಾಮಗ್ರಿ ಸಾಗಿಸಲು ಸರಿಯಾದ ರಸ್ತೆ ಸಂಪರ್ಕ ಇಲ್ಲದಿರುವುದರಿಂದ ಹಾಗೂ ಕಚ್ಚಾ ಸಾಮಗ್ರಿಗಳ ಹಾಗೂ ಕೂಲಿ ಕಾರ್ಮಿಕರ ಭತ್ಯೆಯಲ್ಲಿ ಸಾಕಷ್ಟು ಹೆಚ್ಚಳವಾಗಿರುವುದರಿಂದ ಹಾಗೂ ಈ ಕಾಮಗಾರಿಯು 4702 ಲೆಕ್ಕಶೀರ್ಷಿಕೆಯಡಿ ಅನುಮೋದನೆಯಾದ ಕಾಮಗಾರಿ ಆಗಿರುವುದಾಗಿ ತಿಳಿಸಿ ಶೇಕಡ 10.00 ರಷ್ಟು ಹೆಚ್ಚಿನ ದರಗಳಲ್ಲಿ ನಿರ್ವಹಿಸಲು ಒಪ್ಪಿಗೆ ಪತ್ರ ನೀಡಿ ಈ ದರಗಳಿಗೆ ಟೆಂಡರ್ ಅನುಮೋದಿಸಲು ಕೋರಿರುತ್ತಾರೆ. ಗುತ್ತಿಗೆದಾರರು ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಈ ಕಾಮಗಾರಿಯ ಟೆಂಡರ್‌ನ್ನು ಪರಿಷ್ಕೃತ ದರಗಳ ಮೇಲೆ ಶೇ. 8.50% ಹೆಚ್ಚಿನ ದರಗಳಿಗೆ ಅಂದರೆ ರೂ. 1,04,00,533/– ಗಳಿಗೆ ಅನುಮೋದಿಸಲು ಪರಿಗಣಿಸಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸನೀಇ 08 ಅಪಿಬಂ (ತಾಂತ್ರಿಕ) 2011 ಬೆಂಗಳೂರು, ದಿನಾಂಕ : 10–05–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ದಕ್ಷಿಣ ಕನ್ನಡ ಜಿಲ್ಲೆ, ಬೆಳ್ತಂಗಡಿ ತಾಲ್ಲೂಕು, ಗರ್ಡಾಡಿ ಅಚ್ಚಾಡಿ ಎಂಬಲ್ಲಿ ಕಿಂಡಿ ಅಣೆಕಟ್ಟು ಹಾಗೂ ಬ್ಯಾರೇಜ್ ನಿರ್ಮಾಣ ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತ ರೂ. 95,85,745/– ಗಳ ಮೇಲೆ ಶೇಕಡ. 8.50 ರಷ್ಟು ಹೆಚ್ಚಿನ ಅಂದರೆ ರೂ. 1,04,00,533/– ಗಳಿಗೆ (ರೂ. ಒಂದು ಕೋಟಿ ನಾಲ್ಕು ಲಕ್ಷದ ಐದುನೂರಾ ಮೂವತ್ತಮೂರು ಮಾತ್ರ) ಕಾಮಗಾರಿಯನ್ನು ಶ್ರೀ ಮೊಹಮ್ಮದ್ ರಫಿ ಕೆ.ಎಂ. 1 ನೇ ದರ್ಜೆ ಗುತ್ತಿಗೆದಾರರಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ: 20/01/2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ರುದ್ರಮೂರ್ತಿ**

ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ

ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

ಪಿ.ಆರ್. 1309

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ಡಾ: ಕಿಶೋರ್‌ಕುಮಾರ್ ಮಯ್ಯ, ಅರವಳಿಕೆ ತಜ್ಞರು, ಸಮುದಾಯ ಆರೋಗ್ಯ ಕೇಂದ್ರ, ಹೆಬ್ರಿ ಉಡುಪಿ ಜಿಲ್ಲೆ ಇವರ ರಾಜೀನಾಮೆಯನ್ನು ಅಂಗೀಕರಿಸುವ ಬಗ್ಗೆ.

**ಓದಲಾಗಿದೆ :** ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಇವರ ಪತ್ರ ಸಂಖ್ಯೆ: ಜೆಆರ್‌ಓ(2ಎ)134/2010–11 ದಿನಾಂಕ: 23–02–2011.

**ಪ್ರಸ್ತಾವನೆ:**

ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಇವರು ಮೇಲೆ ಓದಲಾದ ಪತ್ರದಲ್ಲಿ ಡಾ: ಕಿಶೋರ್‌ಕುಮಾರ್ ಮಯ್ಯ ಅರವಳಿಕೆ ತಜ್ಞರು, ಸಮುದಾಯ ಆರೋಗ್ಯ ಕೇಂದ್ರ, ಹೆಬ್ರಿ, ಉಡುಪಿ ಜಿಲ್ಲೆ ಇವರು ವಿಶೇಷ ನೇಮಕಾತಿ ಸಮಿತಿಯ ಮೂಲಕ ಸರ್ಕಾರಿ ಅಧಿಸೂಚನೆ ಸಂಖ್ಯೆ: ಆಕುಕ 648 ಹೆಚ್‌ಎಸ್‌ಹೆಚ್ 2002 ದಿನಾಂಕ: 24–08–2002ರ ಪ್ರಕಾರ ದಿನಾಂಕ: 20–09–2002 ರಂದು ಸೇವೆಗೆ ಸೇರಿದ್ದು, ವೈಯಕ್ತಿಕ ಕಾರಣಗಳಿಂದ ದಿನಾಂಕ: 01–06–2009 ರಿಂದ ಅನ್ವಯವಾಗುವಂತೆ ರಾಜೀನಾಮೆ ಸಲ್ಲಿಸಿ, ಅಂಗೀಕರಿಸುವಂತೆ ಕೋರಿರುತ್ತಾರೆ. ಇವರ ವಿರುದ್ಧ ಯಾವುದೇ ಇಲಾಖಾ ವಿಚಾರಣೆ ಹಾಗೂ ಸರ್ಕಾರಕ್ಕೆ ಯಾವುದೇ ಬೇಬಾಕಿ ಇರುವುದಿಲ್ಲವೆಂದು ಹಾಗೂ ಇವರು ಬಾಂಡ್ ಅವಧಿಯಲ್ಲಿ ಇರುವುದಿಲ್ಲವಾದ್ದರಿಂದ ದಿನಾಂಕ: 01–06–2009 ರಿಂದ ಜಾರಿಗೆ ಬರುವಂತೆ ರಾಜೀನಾಮೆಯನ್ನು ಅಂಗೀಕರಿಸುವಂತೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಮೇಲ್ಕಂಡ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ : ಆಕುಕ 207 ಹೆಚ್‌ಎಸ್‌ಹೆಚ್ 2009, ಬೆಂಗಳೂರು, ದಿನಾಂಕ: 11–05–2011**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ ಡಾ: ಕಿಶೋರ್‌ಕುಮಾರ್ ಮಯ್ಯ, ಅರವಳಿಕೆ ತಜ್ಞರು, ಸಮುದಾಯ ಆರೋಗ್ಯ ಕೇಂದ್ರ, ಹೆಬ್ರಿ, ಉಡುಪಿ ಜಿಲ್ಲೆ ಇವರು ವೈಯಕ್ತಿಕ ಕಾರಣದಿಂದ ತಜ್ಞರ ಹುದ್ದೆಗೆ ನೀಡಿರುವ ರಾಜೀನಾಮೆಯನ್ನು ದಿನಾಂಕ: 01–06–2009 ರಿಂದ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ಅಂಗೀಕರಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಚಿಕ್ಕೇಗೌಡ**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ

(ಸೇವೆಗಳು–1)

ಪಿಆರ್.ನಂ. 1318

## ENERGY SECRETARIAT

**Sub** : Release of Tariff Subsidy to ESCOMs for FY 2010-11 and adjustment of dues from KPTCL, ESCOMs and KPCL to Government of Karnataka.

**Read** : 1. Govt. Orders - subsidy for power supply to IP sets (upto 10 HP)/BJ/KJ:

Rs. In crores

| | | | |
|---|---|---|---|
| EN 18 PSR 2010 Dated 21-04-2010 | | 380-00 | |
| EN 18 PSR 2010 Dated 19-05-2010 | | 187.01 | |
| EN 18 PSR 2010 Dated 09-06-2010 | | 190.00 | |
| EN 18 PSR 2010 Dated 28-06-2010 | | 80.00 | |
| EN 18 PSR 2010 Dated 24-07-2010 | | 350.00 | |
| EN 18 PSR 2010 Dated 17-08-2010 | | 300.00 | |
| EN 18 PSR 2010 Dated 30-08-2010 | | 150.00 | |
| EN 18 PSR 2010 Dated 30-09-2010 | | 150.00 | |
| EN 18 PSR 2010 Dated 08-11-2010 | | 190.00 | |
| EN 18 PSR 2010 Dated 08-012-2010 | | 200.00 | |
| EN 18 PSR 2010 Dated 07-01-2011 | | 250.00 | |
| EN 18 PSR 2010 Dated 07-02-2010 | | 250.00 | |
| EN 18 PSR 2010 Dated 01-03-2011 | | 250.00 | |
| EN 18 PSR 2010 Dated 24-03-2011 | | 300.00 | |
| EN 18 PSR 2010 Dated 30-03-2011 | | | |
| (i) Subsidy | 79.00 | 79.00 | 3306.61 |
| (ii) Arrears of Subsidy for FY 2009-10 as per KERC orders | 446.00 | | 446.00 |
| Total | | | 3752.01 |

2. Govt. Orders - Truing-up/Additional subsidy released to HRECSL.

| | |
|---|---|
| EN 18 PSR 2010 Dated 19-05-2010 | 2.99 |
| EN 54 PSR 2010 Dated 29-12-2010 | 19.26 |
| Total | 22.25 |

3. Govt. Orders - subsidy released to Sathya Sai Hospital

| | |
|---|---|
| EN 90 EEB 2010 Dated 29-07-2010 | 1.80 |
| EN 46 EEB 2011 Dated 28-03-2011 | 0.20 |
| Total | 2.00 |

4. G.O. - Gramapanchayats' Electricity arrears to ESCOMs as on 31.03.2004.

| | |
|---|---|
| EN 28 PSR 2010/P1 Dated 23-03-2011 | 69.31 |

Total Subsidy released for 2010-11 3845.57

5. CEIG letter No. ಮುವಿಪ/ವಿಪ1/ಎ2/38112 ಮತ್ತು 38152 dated: 16–03–2011 ಮತ್ತು 17–03–2011
6. KPCL letter No. A1 Q5 D/dated: 31-03-2011
7. KPTCL letter No. FA(A&R)/KCO-30/29929 dated 31-03-2011

PREAMBLE:

1. In Government Order read at (1) above,
   (a) An amount of Rs. 3306.01 crores has been released towards ESCOMs' claims for Free power supply to
      (i) IP Sets of upto 10 HP and
      (ii) To BJ/KJ consumers (upto 18 Units per month per house hold) and
   (b) An amount of Rs. 446 crores has been released to ESCOMs towards subsidy arrears for FY 2009-10as per KERC orders dated 06-01-2011 (RP)
2. In Government Order read at (2) above, an amount of Rs. 22.25 crores has been released towards truing up subsidy & additional subsidy to Hukkeri Rural Electric Co-operative Society Limited as per KERC orders No. B/01/9 & B/01/09/6260 dated 30-06-2009 & 03-07-2009 respectively.
3. In Government Order read at (3) above, subsidy amount of Rs. 2.00 crores has been released to Sathya Sai Hospital.
4. In Government Order read at (4) above, an amount of Rs. 69.31 crores has been released towards the Electrical arrears as on 31-03-2004 due by Gramapanchayats to ESCOMs.

5. During FY 2010-11, Subsidy amount of Rs. 3845.57 crores as above has been released to the Utilities under HoA "2801-80-101-1-04-106 (Non-Plan):
6. CEIG vide letters read at (5) above has furnished the details for electricity tax & other dues for FY 2010-11.
7. KPCL vide letter read at (6) above, has furnished the details for its dues to Government of Karnataka for FY 2010-11.
8. On behalf of KPCL. KPTCL, & ESCOMs, vide letter read at (7) above KPTCL has furnished the details for amount payable during 2010-11 to Government of Karnataka by KPTCL, ESCOMs and KPCL as under and has requested the Government to issue a Tripartite Adjustment Order to be accounted in the books of KPTCL, ESCOMs, KPCL and GoK for the year 2010-11.

a. Amount Payable by KPTCL to GoK — Rs. In crores

| | |
|---|---|
| Electricity Tax on Auxiliary Consumption | 0.00 |
| Guarantee Commission Payable to GoK | 0.19 |
| Interest on APDRP Loan | 0.50 |
| Principle Repayment of APDRP Loan | 0.59 |
| Total amount payable of GoK by KPTCL | 1.28 |

b. Amount Payable by ESCOMs to GoK

| | BESCOM | MESCOM | CESC | HESCOM | GESCOM | TOTAL |
|---|---|---|---|---|---|---|
| Guarantee Commission | 0.04 | 0.01 | 0.02 | 0.30 | 0.02 | 0.39 |
| Electriciy Tax collected and retained | | 18.08 | 13.50 | 62.48 | 57.70 | 151.76 |
| APDRP Loan - Principle dues | 4.17 | | 2.15 | 5.44 | 0.71 | 12.47 |
| APDRP Loan - Interest dues | 3.47 | | 2.10 | 4.58 | 0.59 | 10.74 |
| PMGY Loan - Principle dues | 0.11 | 0.02 | | 0.34 | 0.55 | 1.02 |
| PMGY Loan - Interest dues | 0.16 | 0.14 | | 0.60 | 0.92 | 1.82 |
| Principle Repayment of Power sector Automation Loan | 0.44 | | | 0.39 | 0.13 | 0.96 |
| Interest on Power Sector Automation Loan | 0.43 | | | 0.41 | 0.08 | 0.92 |
| Ganga Kalyani Principle dues | 0.54 | 0.12 | | 0.52 | | 1.18 |
| Ganga Kalyani Interest dues | 0.36 | 0.08 | | 0.39 | | 0.83 |
| Total | 9.72 | 18.45 | 17.77 | 75.45 | 60.70 | 182.09 |
| Total KPTCL and ESCOMs (a+b) | | | | | | 183.37 |

c) Amount payable by KPCL to GoK

| | |
|---|---|
| Electricity Tax on Auxiliary Consumption | 3.99 |
| Guarantee Commission Payable to GoK | 1.88 |
| Royalty Payable to GoK | 39.83 |
| Total | 45.70 |
| Total amount payable to GoK by KPTCL, ESCOMs and KPCL (b+c) | 229.07 |

Accordingly, the request of KPTCL/Utilities has been examined considering also the electricity tax collection in respect of Feb/March-2011 Energy and the following orders are issued.

**GOVERNMENT ORDER NO. EN 18 PSR 2010/P1 BANGALORE, DATED 31ST MARCH 2011**

1. Government accords approval for the following adjustments in the books of accounts of KPTCL ESCOMs, KPCL, CEIG and GoK for the FY 2010-11.
2. A sum of Rs. 225.66 crores (Rupees Two hundred twenty five crores and sixty six lakhs only) being the portion of dues of KPTCL and ESCOMs to GoK and Rs. 45.70 Crores (Rupees forty five crores and seventy lakhs only) being the portion of KPCL's dues to GoK shall be accounted as under:

**A - KPTCL's ESCOM's PORTION**

Rs. In crores

| DEBIT | | | CREDIT | |
|---|---|---|---|---|
| Sl. No. | Head of Account | Amount | Head of Account | Amount |
| 1 | Subsidy to KPTCL/ESCOMs<br>2801-80-101-1-04-106<br>a) MESCOM - 18.08<br>b) CESC - 13.50<br>c) HESCOM 62.48 12.45 | 225.66 | Electricity Tax - 0043-00-101-0-01<br>ESCOMs - 151.76<br>Electricity-tax collection of Feb/Mar-2011 energy<br>Interest on loans to KPTCL/ | 151.76<br>42.29 |

| | | | | |
|---|---|---|---|---|
| | d) GESCOM 57.70 04.25<br>e) BESCOM - 25.59<br>Total 151.76 42.29 | | ESCOMs:<br>0049-04-190-0-02<br>PMGY 1.82<br>APDRP - 11.24<br>Ganga Kalyana 0.83<br>Power Sector Automation 0.92 | 14.81 |
| | | | **Principle repayment of Loans:**<br>6801-00-205-1-02<br>PMGY - 1.02<br>APDRP - 13.06<br>Ganga Kalyana 1.18<br>Power Sector Automation 0.96 | 16.22 |
| | | | **Guarantee Commission**<br>0075-00-108-0-01<br>ESCOMs - 0.39<br>KPTCL - 0.19 | 0.58 |
| | Total A | 225.66 | | 225.66 |

B - KPCL's portion

Rs. In crores

| | DEBIT | | CREDIT | |
|---|---|---|---|---|
| Sl. No. | Head of Account | Amount | Head of Account | Amount |
| 2 | **Subsidy to KPTCL/ESCOMs**<br>**2801-80-101-1-04-106**<br>MESCOM 00.63<br>HESCOM 05.58<br>CESC 28.07<br>BESCOM 11.42<br>Total→ 45.70 | 45.70 | **Royalty from KPCL -**<br>**0801-01-201-0-01**<br>Guarantee Commission from KPCL<br>0075-00-108-0-01<br>Electricity Tax 0043-00-101-0-01 | 39.83<br><br>1.88<br>3.99 |
| | Total →B | 45.70 | | 45.70 |
| | **Total → A+ B** | **271.36** | | **271.36** |

3. A sum of Rs. 271.36 crores (Rupees two hundred seventy one crores and thirty six lakhs only) shall be adjusted among KPTCL ESCOMs, KPCL and Government of Karnataka for 2010-11.
4. There is no outgo of cash. Therefore, Accountant General, Karnataka is requested to carry out necessary adjustments in the Books of Accounts of GoK for the year 2010-11.
5. KPTCL, ESCOMs KPCL and CEIG are permitted to carryout necessary adjustments in their Books of Accounts for 2010-11.
6. This Government Order is issued with the concurrence of Finance Department vide No. FD 773 Exp-i/2011 dated 31-03-2011.

By Order and in the name of the Governor of Karnataka

**SURESH. B. KRISHNAPPANAVAR**

PR No. 1319

Under Secretary to Government

Energy Department

## HOME SECRETARIAT

**Sub:** Re-constitution of Review Committee to review the cases of undertrial prisoners under NDPS ACT, 1985.

**Read:**
1. Judgment of the Hon'ble Supreme Court of India in Writ Petition (Criminal) No.307/1993 decided on dated 07-10-1994.
2. Order dated 17-04-1995 of Hon'ble Supreme Court of India in Writ Petition (Criminal) No.307/1993.
3. Government Order No. HTD 17 PND 94, dated 22-11-1995.
4. Government Order No. HTD 17 PND 94, dated 03-06-1999.
5. Government Order No. HD 09 PND 2005, dated 03-04-2006.
6. Government Order No. HD 04 PND 2006, dated 15-05-2009.

**PREAMBLE:**

In the judgment of the Hon'ble Supreme Court of India read at (1) above, it is recommended to the Government of Maharastra to set up Review Committee headed by a Judicial Officer, preferably a retired High Court Judge, with one or two other

members to review the cases of undertrials who have been injail for long including those released under this order and to recommend to the State Government which of the cases deserve withdrawal. The State Government can then advise the Public Prosecutor to move the Court for withdrawal of such cases.

In the Order of the Hon'ble Supreme Court of India read at (2) above, it is also directed that the decision of this court in the aforesaid matter (Supreme Court Legal Aid Committee - vs - Union of India and others) shall be followed, applied and implemented by the ten States namely States of Andhra Pradesh, Assam, Kerala, Karnataka, Gujrat, Orissa, Bihar, West Bengal, Uttar Pradesh and Madhya Pradesh.

Accordingly, Government has constituted a Review Committee for the State of Karnataka to review the cases of undertrial prisoners under NDPS Act, 1985 vide Government Order read at (3) above, then Government has re-constituted the Review Committee vide Government Orders read at (4), (5) and (6) above. Now the Government has decided to re-constitute the Review Committee to review the cases of undertrial prisoners under NDPS Act, 1985.

Hence the following order.

**GOVERNMENT ORDER NO. HD 6 PND 2010, BANGALORE, DATED: 19TH MAY 2011.**

The Government are pleased to re-constitute the Review Committee with the following members to review the cases undertrial prisoners under Narcotic Drugs and Physchotropic Substances Act. 1985 with immediate effect and until further orders.

| | | | |
|---|---|---|---|
| (1) | Hon'ble Shri Justice R. Gururajan, Judge, Hon'ble High Court of Karnataka (Retd), Bangalore | : | Chairman |
| (2) | The Secretary to Government, (PCAS), Home Department | : | Member |
| (3) | The Secretary to Government, Law, Justice and Human Rights Department | : | Member |
| (4) | The Director of Prosecution and Government Litigations, Bangalore | : | Secretary and Convenor of the Committee |

2. The sitting fee to the Chairman is Rs. 500/- per sitting. The expenditure account may be debitable to the Head of Account "2052- Secretariat - General Services - 090 - Secretariat - i - 02 - Expenditure connected with the Committees, Conferences, Tribunals etc., (Non-Plan)". The sitting fee to the Chairman is as prescribed debitable to the Head of Account mentioned in the Government order dated 03-06-1999.

By Order and in the name of the Governor of Karnataka

**K.C. SIDDAPPA**

PR No. 1320

Under Secretary to Government

Home Department.

(Law and Order, COFEPOSA & Prosecutions)

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ನಾಗರಾಜು, ಸಹಾಯಕ ಅಭಿಯೋಗ ನಿರ್ದೇಶಕರು, ಆರಕ್ಷಕ ಅಧೀಕ್ಷಕರ ಕಛೇರಿ, ಮಡಿಕೇರಿ (ಪ್ರಭಾರ ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು, ಪ್ರಿನ್ಸಿಪಾಲ್ ಜೆ. ಎಂ. ಎಫ್. ಸಿ. ನ್ಯಾಯಾಲಯ, ಮಡಿಕೇರಿ–ಅಮಾನತ್ತಿನಲ್ಲಿರುವವರು) ಇವರನ್ನು ಸೇವೆಗೆ ಪುನರ್ ನಿಯುಕ್ತಿಗೊಳಿಸುವ ಕುರಿತು.

**ಓದಲಾಗಿದೆ :**

1. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ: ಡಿಪಿಎನ್/ಸಿಶಾ–1/18/2010–11, ದಿನಾಂಕ 3–5–2010.
2. ಸರ್ಕಾರದ ಆದೇಶ ಸಂಖ್ಯೆ : ಒಇ 131 ಪಿಪಿಇ 2010, ದಿನಾಂಕ 2–5–2010.
3. ಸರ್ಕಾರದ ಆದೇಶ ಸಂಖ್ಯೆ: ಒಇ 338 ಪಿಪಿಇ 2010 (ಭಾಗ–1), ದಿನಾಂಕ 29–04–2011.

4) ಶ್ರೀ ನಾಗರಾಜು, ಇವರ ಮನವಿ ದಿನಾಂಕ 18–08–2010

5) ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ: ಡಿಪಿಎನ್‌ಸಿಶಾ–1/18/2010–11, ದಿನಾಂಕ 06–10–2010.

6) ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂಖ್ಯೆ: ಲೋಕ್/ಐಎನ್‌ವಿ(ಜಿ)/ಎಂ–20/ಸಿಆರ್–1/2010/ಮಡಿಕೇರಿ, ದಿನಾಂಕ 27–12–2010.

**ಪ್ರಸ್ತಾವನೆ :**

ಶ್ರೀ ನಾಗರಾಜು, ಸಹಾಯಕ ಅಭಿಯೋಗ ನಿರ್ದೇಶಕರು, ಆರಕ್ಷಕ ಅಧೀಕ್ಷಕರವರ ಕಛೇರಿ, ಮಡಿಕೇರಿ (ಪ್ರಭಾರ ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು, ಪ್ರಿನ್ಸಿಪಾಲ್ ಜೆ. ಎಂ. ಎಫ್. ಸಿ. ನ್ಯಾಯಾಲಯ, ಮಡಿಕೇರಿ–ಅಮಾನತ್ತಿನಲ್ಲಿರುವವರು) ಇವರು ಮಡಿಕೇರಿಯ ಸಿವಿಲ್ ನ್ಯಾಯಾಲಯದ ಸಿ.ಸಿ.ನಂ. 1794/2007ರಲ್ಲಿ ದಾಖಲಾದ ಪ್ರಕರಣದ ಫಿರ್ಯಾದುದಾರರಾದ ಶ್ರೀ ಪಿ. ಟಿ. ಪೊಣಚ್ಚ ಬಿನ್ ಲೇಟ್ ಪಿ. ಕೆ. ತಿಮ್ಮಯ್ಯ, ಪಾಲಂಗಾಲ ಗ್ರಾಮ, ಕರಡ ಅಂಚೆ, ವಿರಾಜಪೇಟೆ ತಾಲ್ಲೂಕು, ಕೊಡಗು ಜಿಲ್ಲೆ ಇವರಿಂದ ರೂ. 3,000/–ಲಂಚವನ್ನು ಪಡೆಯುತ್ತಿದ್ದಾಗ ಮಡಿಕೇರಿ ಲೋಕಾಯುಕ್ತ ಪೊಲೀಸರ ಬಲೆಗೆ ಸಿಕ್ಕಿಬಿದ್ದಿದ್ದರೆಂಬ ಆಧಾರದ ಮೇಲೆ ಓದಲಾದ (1)ರ ದಿನಾಂಕ 3–5–2010ರ ಪತ್ರದಲ್ಲಿ ಸದರಿಯವರನ್ನು ಅಮಾನತ್ತಿನಲ್ಲಿಡುವಂತೆ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ, ಬೆಂಗಳೂರು ಇವರು ಶಿಫಾರಸ್ಸು ಮಾಡಿದ್ದರು. ಆ ಪ್ರಕಾರ ಮೇಲೆ ಓದಲಾದ (2)ರ ಸರ್ಕಾರದ ಆದೇಶದಲ್ಲಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957ರ ನಿಯಮ 10(1)(ಎ)ರ ಅನುಸಾರ ಇಲಾಖಾ ವಿಚಾರಣೆಯನ್ನು ಬಾಕಿ ಇರಿಸಿ ದಿನಾಂಕ 22–04–2010 ರಿಂದ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ಅಮಾನತ್ತಿನಲ್ಲಿ ಇರಿಸಲಾಗಿದೆ.

ಶ್ರೀ ನಾಗರಾಜು ಇವರ ವಿರುದ್ಧ ಭ್ರಷ್ಟಾಚಾರ ನಿರ್ಮೂಲನಾ ಕಾಯ್ದೆ 1988ರ ಕಲಂ 7,13(1)(ಡಿ) ಜೊತೆಯಲ್ಲಿ ಓದಲಾದ ಕಲಂ 13(2)ರ ಪ್ರಕಾರ ಶಿಕ್ಷಾರ್ಹ ಅಪರಾಧಕ್ಕಾಗಿ ಸಕ್ಷಮ ನ್ಯಾಯಾಲಯದಲ್ಲಿ ಕ್ರಿಮಿನಲ್ ಮೊಕದ್ದಮೆ ಹೂಡಲು ಭ್ರಷ್ಟಾಚಾರ ನಿರ್ಮೂಲನಾ ಕಾಯ್ದೆ 1988ರ ಕಾಯ್ದೆ ಕಲಂ 19(1)(ಬಿ)ರ ಅನ್ವಯ ಮಂಜೂರಾತಿಯನ್ನು ಕರ್ನಾಟಕ ಲೋಕಾಯುಕ್ತ ಪೊಲೀಸರಿಗೆ ಮೇಲೆ ಓದಲಾದ (3)ರ ಸರ್ಕಾರದ ಆದೇಶದಲ್ಲಿ ನೀಡಲಾಗಿರುತ್ತದೆ.

ಶ್ರೀ ನಾಗರಾಜು, ಸಹಾಯಕ ಅಭಿಯೋಗ ನಿರ್ದೇಶಕರು, ಆರಕ್ಷಕ ಅಧೀಕ್ಷಕರವರ ಕಛೇರಿ, ಮಡಿಕೇರಿ (ಪ್ರಭಾರ ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು, ಪ್ರಿನ್ಸಿಪಾಲ್ ಜೆ.ಎಂ.ಎಫ್.ಸಿ. ನ್ಯಾಯಾಲಯ, ಮಡಿಕೇರಿ ಅಮಾನತ್ತಿನಲ್ಲಿರುವವರು) ಇವರು ತಮ್ಮ ಅಮಾನತ್ತನ್ನು ರದ್ದುಪಡಿಸಿ ಸೇವೆಗೆ ಪುನರ್ ನೇಮಕ ಮಾಡುವಂತೆ ಮೇಲೆ ಓದಲಾದ (4)ರ ಪತ್ರದಲ್ಲಿ ಕೋರಿರುತ್ತಾರೆ.

ಶ್ರೀ ನಾಗರಾಜು, ಸಹಾಯಕ ಅಭಿಯೋಗ ನಿರ್ದೇಶಕರು, ಆರಕ್ಷಕ ಅಧೀಕ್ಷಕರವರ ಕಛೇರಿ, ಮಡಿಕೇರಿ (ಪ್ರಭಾರ ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು, ಪ್ರಿನ್ಸಿಪಾಲ್ ಜೆ.ಎಂ.ಎಫ್.ಸಿ. ನ್ಯಾಯಾಲಯ, ಮಡಿಕೇರಿ ಅಮಾನತ್ತಿನಲ್ಲಿರುವವರು) ಇವರ ಅಮಾನತ್ತಿನ ಆದೇಶದ ಅಥವಾ ಅಮಾನತ್ತಿನ ಜಾರಿಯ ದಿನಾಂಕಗಳನ್ನು ಪರಿಗಣಿಸಿದ್ದಲ್ಲಿ ನ್ಯಾಯಾಲಯದಲ್ಲಿ ಅಧಿಕಾರಿಯವರ ವಿರುದ್ಧ ವಿಚಾರಣೆಯು ನಿಗದಿತ 03 ತಿಂಗಳ ಅವಧಿ ಅಥವಾ ಅವಧಿಯ ಒಳಗೆ ಪ್ರಾರಂಭವಾಗಿರುವುದಿಲ್ಲ. ಈ ಕಾರಣದಿಂದ ಅವರ ಅಮಾನತ್ತನ್ನು ರದ್ದುಪಡಿಸಿ, ಪುನರ್ ನೇಮಕ ಮಾಡಬಹುದೆಂದು ಮೇಲೆ ಓದಲಾದ (5)ರ ಪತ್ರದಲ್ಲಿ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರು ಸರ್ಕಾರವನ್ನು ಕೋರಿರುತ್ತಾರೆ.

ಈ ಪ್ರಕರಣದ ತನಿಖೆಯು ಪೂರ್ಣಗೊಂಡಿದ್ದು, ಈಗಾಗಲೇ ಆರೋಪಿತ ಅಧಿಕಾರಿಯ ವಿರುದ್ಧ ಸಕ್ಷಮ ನ್ಯಾಯಾಲಯದಲ್ಲಿ ಕ್ರಿಮಿನಲ್ ಮೊಕದ್ದಮೆ ಹೂಡಲು ಲೋಕಾಯುಕ್ತ ಪೊಲೀಸರಿಗೆ ಮಂಜೂರಾತಿ ನೀಡಲಾಗಿರುವುದರಿಂದ ಹಾಗೂ ಸದರಿ ಆಪಾದಿತರನ್ನು ಅಮಾನತ್ತಿನಿಂದ ತೆರವುಗೊಳಿಸುವ ಬಗ್ಗೆ ಸೂಕ್ತ ಕ್ರಮವನ್ನು ಕೈಗೊಳ್ಳಬಹುದಾಗಿರುತ್ತದೆ. ಸದರಿ ಆಪಾದಿತ ಸರ್ಕಾರಿ ಅಧಿಕಾರಿಯವರನ್ನು ಅಮಾನತ್ತಿನಿಂದ ಬಿಡುಗಡೆ ಮಾಡಿದಲ್ಲಿ ಅವರನ್ನು ಮರು ನೇಮಕ ಮಾಡುವಾಗ ಘಟನಾ ಸ್ಥಳವನ್ನು ಹೊರತುಪಡಿಸಿ ಬೇರೆ ಸ್ಥಳದಲ್ಲಿ ನೇಮಕ ಮಾಡಬಹುದೆಂದು ಮೇಲೆ ಓದಲಾದ (6)ರ ದಿನಾಂಕ 27–12–2010ರ ಪತ್ರದಲ್ಲಿ ಅಪರ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ತಿಳಿಸಿದ್ದಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಒಇ 338 ಪಿಪಿಇ 2010, ಬೆಂಗಳೂರು, ದಿನಾಂಕ : 7–5–2011**

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಪರಿಶೀಲಿಸಿ, ಸರ್ಕಾರವು ಶ್ರೀ ನಾಗಾರಾಜು, ಸಹಾಯಕ ಆಭಿಯೋಗ ನಿರ್ದೇಶಕರು, ಆರಕ್ಷಕ ಅಧೀಕ್ಷಕರವರ ಕಛೇರಿ, ಮಡಿಕೇರಿ (ಪ್ರಭಾರ ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು, ಪ್ರಿನ್ಸಿಪಾಲ್ ಜೆ.ಎಂ.ಎಫ್.ಸಿ. ನ್ಯಾಯಾಲಯ, ಮಡಿಕೇರಿ–ಅಮಾನತ್ತಿನಲ್ಲಿರುವವರು) ಇವರ ವಿರುದ್ಧ ಮೊಕದ್ದಮೆ/ಇಲಾಖಾ ವಿಚಾರಣೆ ಬಾಕಿ ಇರಿಸಿ, 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ 10ನೇ ನಿಯಮದ 5ನೇ ಉಪನಿಯಮ (ಸಿ) ರನ್ವಯ ಈ ಕೂಡಲೇ ಜಾರಿಗೆ ಬರುವಂತೆ ಮತ್ತು ಮುಂದಿನ ಅದೇಶದವರೆಗೆ ಇವರ ಅಮಾನತ್ತನ್ನು ರದ್ದುಪಡಿಸಿ, ಇವರನ್ನು ಚಾಮರಾಜನಗರದ ಆರಕ್ಷಕ ಅಧೀಕ್ಷಕರ ಕಛೇರಿಯಲ್ಲಿ ಕಾಲಿ ಇರುವ ಸಹಾಯಕ ಅಭಿಯೋಗ ನಿರ್ದೇಶಕರ ಹುದ್ದೆಗೆ ವರ್ಗಾವಣೆಯ ಮೂಲಕ ಪುನರ್ ನಿಯುಕ್ತಿಗೊಳಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ. ಸಿ. ಸಿದ್ದಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ

ಪಿ.ಆರ್. 1321 (ಕಾ. ಮತ್ತು ಸು. ಹಾಗೂ ಕಾಫಿ, ಪೋಸಾ ಮತ್ತು ಅಭಿಯೋಗಗಳು)

## ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯ

**ವಿಷಯ :** ಜಿಲ್ಲಾ ಅಂಗವಿಕಲರ ಪುನರ್ವಸತಿ ಕೇಂದ್ರಗಳನ್ನು [ಡಿ.ಡಿ.ಆರ್.ಸಿ.] ಪುನಶ್ಚೇತನಗೊಳಿಸುವ ಬಗ್ಗೆ.

**ಓದಲಾಗಿದೆ :** ನಿರ್ದೇಶಕರು, ಅಂಗವಿಕಲರ ಹಾಗೂ ಹಿರಿಯ ನಾಗರಿಕರ ಕಲ್ಯಾಣ ಇಲಾಖೆ ಇವರ ಪತ್ರ ಸಂಖ್ಯೆ: ನಿಅಕಇ/ಯೋಜನಾ ಶಾಖೆ/ಸಿ–9/12/2010–11/485, ದಿನಾಂಕ 28–06–2010, ಸಂಖ್ಯೆ: ನಿಅಕಇ/ಜಿ.ಅಂ.ಪು.ಕೇಂ/ಸಿ–9/2010–11/3284 ಮತ್ತು 155, ದಿನಾಂಕ 17–03–2011 ಮತ್ತು 27–04–2011.

**ಪ್ರಸ್ತಾವನೆ :**

ನಿರ್ದೇಶಕರು, ಅಂಗವಿಕಲರ ಹಾಗೂ ಹಿರಿಯ ನಾಗರಿಕರ ಕಲ್ಯಾಣ ಇಲಾಖೆ ಇವರು ಮೇಲೆ ಓದಲಾದ ಪತ್ರಗಳಲ್ಲಿ ರಾಜ್ಯದ ತುಮಕೂರು, ದಕ್ಷಿಣ ಕನ್ನಡ, ಮಂಡ್ಯ, ಬಳ್ಳಾರಿ ಬೆಳಗಾಂ, ಗುಲ್ಬರ್ಗ ಹಾಗೂ ಬೀದರ್‌ಗಳಲ್ಲಿ ಕೇಂದ್ರ ಸರ್ಕಾರದಿಂದ ಅನುದಾನ ಪಡೆದು ಕಾರ್ಯ ನಿರ್ವಹಿಸುತ್ತಿದ್ದ ಜಿಲ್ಲಾ ಅಂಗವಿಕಲರ ಪನರ್ವಸತಿ ಕೇಂದ್ರಗಳು ಪ್ರಸ್ತುತ ಕೇಂದ್ರ ಸರ್ಕಾರದ ಅನುದಾನವಿಲ್ಲದೆ ಸ್ಥಗಿತಗೊಂಡಿರುವ ಹಿನ್ನೆಲೆಯಲ್ಲಿ ಈ ಕೇಂದ್ರಗಳ ಪುನಶ್ಚೇತನಕ್ಕೆ ರಾಜ್ಯ ಸರ್ಕಾರದ ಆಯವ್ಯಯದಲ್ಲಿ ಅವಕಾಶ ಮಾಡಿಕೊಟ್ಟು ಆಡಳಿತಾತ್ಮಕ ಮಂಜೂರಾತಿಯನ್ನು ಹೊರಡಿಸಲು ಕೋರಿ ಜಿಲ್ಲಾ ಅಂಗವಿಕಲರ ಪುನರ್ವಸತಿ ಕೇಂದ್ರ ಯೋಜನೆಯ ವಿವರಗಳನ್ನು ಹಾಗೂ 7 ಜಿಲ್ಲೆಗಳಲ್ಲಿ ಯೋಜನೆಯನ್ನು ಅನುಷ್ಠಾನಗೊಳಿಸಲು ಆವರ್ತಕ ಹಾಗೂ ಅನಾವರ್ತಕ ವೆಚ್ಚಗಳಿಗಾಗಿ ತಗಲುವ ರೂ. 180.60 ಲಕ್ಷಗಳ ಆಯವ್ಯಯವನ್ನು ನಿಗದಿಪಡಿಸುವಂತೆ ಕೋರಿರುತ್ತಾರೆ. ತದನಂತರ ದಿನಾಂಕ 17–03–2011ರ ಪತ್ರದಲ್ಲಿ ಮೈಸೂರು, ಗದಗ ಮತ್ತು ರಾಯಚೂರು ಜಿಲ್ಲೆಗಳ ಜಿಲ್ಲಾ ಅಂಗವಿಕಲರ ಪುನರ್ವಸತಿ ಕೇಂದ್ರಗಳನ್ನು (ಡಿ.ಡಿ.ಆರ್.ಸಿ.) ರಾಜ್ಯ ಅನುದಾನದಡಿ ಅನುಷ್ಠಾನಗೊಳಿಸಲು 2011–12ನೇ ಸಾಲಿನಲ್ಲಿ ಆಯವ್ಯಯ ಅವಕಾಶ ಮಾಡಿಕೊಳ್ಳಲಾಗಿದ್ದು, ಅದರಂತೆ ಮೈಸೂರು, ಗದಗ ಮತ್ತು ರಾಯಚೂರು ಜಿಲ್ಲೆಗಳಲ್ಲಿ ಆಯಾ ಜಿಲ್ಲೆಗಳ ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿರುವ ಇಂಡಿಯನ್ ರೆಡ್‌ಕ್ರಾಸ್ ಸೊಸೈಟಿ ಮುಖಾಂತರ ನಡೆಸಲು ಆಡಳಿತಾತ್ಮಕ ಆದೇಶ ಹೊರಡಿಸುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಲಾಗಿದೆ. ರಾಜ್ಯದ ಜನಸಂಖ್ಯೆಯ ಶೇ. 10 ರಷ್ಟು ಜನರು ವಿವಿಧ ರೀತಿಯ ಅಂಗವಿಕಲತೆಯಿಂದ ಬಳಲುತ್ತಿದ್ದು, ಮಾನಸಿಕವಾಗಿ, ದೈಹಿಕವಾಗಿ, ದೃಷ್ಟಿದೋಷವುಳ್ಳವರು ಮತ್ತು ಶ್ರವಣದೋಷವುಳ್ಳವರಿಗೆ ಪುನರ್ವಸತಿ ಸೌಲಭ್ಯವನ್ನು ಹೆಚ್ಚಾಗಿ ನಗರ ಪ್ರದೇಶದಲ್ಲಿರುವವರು ಮಾತ್ರ ಪಡೆಯುತ್ತಿದ್ದು, ಗ್ರಾಮೀಣ ಪ್ರದೇಶದಲ್ಲಿರುವ ಅಂಗವಿಕಲರು ಈ ಸೌಲಭ್ಯದಿಂದ ವಂಚಿತರಾಗುತ್ತಿರುವುದನ್ನು ತಡೆಗಟ್ಟಲು ಅಂಗವಿಕಲರ ಪುನರ್ವಸತಿ ಸೌಲಭ್ಯಗಳನ್ನು ಗ್ರಾಮೀಣ ಮಟ್ಟದಲ್ಲಿ ದೊರಕಿಸುವುದು ಅಗತ್ಯವೆಂದು ಭಾವಿಸಿ, 2011–12ನೇ ಸಾಲಿನಲ್ಲಿ ಮೈಸೂರು ರಾಯಚೂರು ಮತ್ತು ಗದಗ್ ಜಿಲ್ಲೆಗಳಲ್ಲಿ ಜಿಲ್ಲಾ ಅಂಗವಿಕಲರ ಪುನರ್ವಸತಿ ಕೇಂದ್ರಗಳನ್ನು ರಾಜ್ಯ ಸಹಾಯಾನುದಾನ ನೀಡಿ ಪುನಶ್ಚೇತನಗೊಳಿಸಲು ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಮಮಇ 173 ಪಿಎಚ್‌ಪಿ 2010, ಬೆಂಗಳೂರು, ದಿನಾಂಕ : 12–05–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ರಾಜ್ಯದ ಮೈಸೂರು, ಗದಗ ಮತ್ತು ರಾಯಚೂರು ಜಿಲ್ಲೆಗಳ ಜಿಲ್ಲಾ ಅಂಗವಿಕಲರ ಪುನರ್ವಸತಿ ಕೇಂದ್ರಗಳನ್ನು (ಡಿ.ಡಿ.ಆರ್.ಸಿ.) 2011–12ನೇ ಸಾಲಿನಿಂದ ರಾಜ್ಯ ಅನುದಾನದಡಿ ಆಯಾ ಜಿಲ್ಲೆಗಳ ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿರುವ ಜಿಲ್ಲಾ ನಿರ್ವಹಣಾ ಸಮಿತಿಯಲ್ಲಿ ಆಯ್ಕೆಗೊಳ್ಳುವ ಇಂಡಿಯನ್ ರೆಡ್‌ಕ್ರಾಸ್ ಸೊಸೈಟಿ ಮುಖಾಂತರ ಯೋಜನೆಯ ಮಾರ್ಗಸೂಚಿಯನುಸಾರ ನಡೆಸಲು ಸರ್ಕಾರವು ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ.

ಈ ಆದೇಶಕ್ಕೆ ಲಗತ್ತಿಸಿರುವ ಅನುಬಂಧದಲ್ಲಿರುವಂತೆ ವೆಚ್ಚವನ್ನು ಲೆಕ್ಕಶೀರ್ಷಿಕೆ 2235–02–101–0–99 ಯೋಜನೆ ಉ.ಲೆ.ಶೀ. 100 ಧನಸಹಾಯ ಮತ್ತು ಪರಿಹಾರ ಅಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಅಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ: ಸಕಕಾ 92 ಆಂಅಸ 2011, ದಿನಾಂಕ 30–04–2011ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ. ಕಮಲಮ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ–2

ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ

## ಅನುಬಂಧ-1

ಮೈಸೂರು ಜಿಲ್ಲಾ ಅಂಗವಿಕಲರ ಪುನರ್ವಸತಿ ಕೇಂದ್ರದ ಅನುಷ್ಠಾನಕ್ಕೆ ಬೇಕಾಗುವ ವಾರ್ಷಿಕ ಆಯವ್ಯಯ

**I ಆವರ್ತಕ ವೆಚ್ಚಗಳು**

| ಕ್ರ. ಸಂ. | ಹುದ್ದೆಗಳ ವಿವರ | | | ಮಾಸಿಕ ಗೌರವ ಧನ | ಬೇಕಾಗುವ ವಾರ್ಷಿಕ ಆಯವ್ಯಯ |
|---|---|---|---|---|---|
| | ಹುದ್ದೆ | ಸಂಖ್ಯೆ | ವಿದ್ಯಾರ್ಹತೆ ಅನುಭವ | | |
| 1 | ನೋಡಲ್ ಆಫೀಸರ್/ಸಮಾಜ ಸೇವಾ ಕಾರ್ಯಕರ್ತರು (ಯೂನಿಟ್ ಇನ್‌ಚಾರ್ಜ್) | 01 | ಎಂ.ಎಸ್.ಡಬ್ಲ್ಯೂ ಪುನರ್ವಸತಿ ಸೇವೆ ಅನುಭವ | 15000 | 180000 |
| 2 | ಅಕೌಂಟೆಂಟ್ ಕಂ ಕ್ಲರ್ಕ್ | 01 | ಬಿ.ಕಾಂ. ಪದವಿ ಗಣಕ ಯಂತ್ರದ ಅನುಭವ | 8000 | 96000 |
| 3 | ಸ್ಟೋರ್ ಕೀಪರ್ ಕಂ ಕ್ಲರ್ಕ್ | 01 | ಪದವಿ ಗಣಕ ಯಂತ್ರದ ಅನುಭವ | 6000 | 72000 |
| 4 | ಕಂಪ್ಯೂಟರ್ ಆಪರೇಟರ್ | 01 | ಕಂಪ್ಯೂಟರ್ ಜ್ಞಾನ ಹೊಂದಿರಬೇಕು | 5000 | 60000 |
| 5 | ಕಛೇರಿ ಸೇವಕ | 01 | 7ನೇ ತರಗತಿ | 4000 | 48000 |
| 6 | ರಾತ್ರಿ ಕಾವಲುಗಾರರು | 01 | 7ನೇ ತರಗತಿ | 4000 | 48000 |
| 7 | ಕೃತಕಾಂಗ ಜೋಡಣೆ ಪಿ & ಒ ಅಭಿಯಂತರರು | 01 | ಪಿ & ಒ ಇಂಜಿನಿಯರಿಂಗ್ ಪದವಿ/ಡಿಪ್ಲೊಮ 2 ರಿಂದ 5 ವರ್ಷ ಅನುಭವ | 15000 | 180000 |
| 8 | ಪ್ರಾಸ್ಥೊಟಿಸ್ಟ್ & ಆರ್ಥೋಟಿಸ್ಟ್ | 02 | ಡಿಪ್ಲೊಮ ಇನ್ ಪಿ & ಒ/ಐಟಿಐ (ಫಿಟ್ಟರ್) 2 ವರ್ಷದ ಕ್ಷೇತ್ರ ಮಟ್ಟದ ಅನುಭವ | 10000 | 240000 |
| 9 | ಲೆದರ್ ವರ್ಕರ್/ಷೂ ಮೇಕರ್ | 01 | ಸರ್ಟಿಫಿಕೇಟ್ ಇನ್ ಲೆದರ್ ವರ್ಕಿಂಗ್ & ಶೂ ಮೇಕಿಂಗ್ 2 ವರ್ಷದ ಕ್ಷೇತ್ರ ಮಟ್ಟದ ಅನುಭವ | 5000 | 60000 |
| 10 | ಕ್ಲಿನಿಕಲ್ ಸೈಕಾಲಜಿಸ್ಟ್ (ವಾರಕ್ಕೆ 03 ದಿನಗಳು, ದಿನಕ್ಕೆ ರೂ. 1000/-ಗಳಂತೆ) | 01 | ಎಂ. ಎ. ಇನ್ ಕ್ಲಿನಿಕಲ್ ಸೈಕಾಲಜಿ | 12000 | 144000 |
| 11 | ಸ್ಪೀಚ್ ಥೆರಪಿಸ್ಟ್ & ಆಡಿಯಾಲಿಜಿಸ್ಟ್ (ವಾರಕ್ಕೆ ದಿನಗಳು) | 01 | ಡಿಗ್ರಿ ಇನ್ ಸ್ಪೀಚ್ ಪೆಥಾಲಜಿ & ಆಡಿಯಾಲಜಿ | 12000 | 144000 |
| 12 | ಮೊಬಿಲಿಟಿ ಇನ್‌ಸ್ಟ್ರಕ್ಟರ್ | 01 | ಸರ್ಟಿಫಿಕೇಟ್ ಕೋರ್ಸ್ ಇನ್ ಒ & ಎಂ | 5000 | 60000 |
| 13 | ಸ್ಪೆಷಲ್ ಎಜುಕೇಟರ್ (ಹೆಚ್.ಐ. ವಿ.ಐ., ಎಂ.ಆರ್.) | 03 | ಸರ್ಟಿಫಿಕೇಟ್ ಕೋರ್ಸ್ ಇನ್ ಹೆಚ್.ಐ. ವಿ.ಐ. & ಎಂ. ಆರ್. | 5000 | 60000 |
| 14 | ಇಯರ್ ಮೊಲ್ಡ್ ಟೆಕ್ನಿಷಿಯನ್ | 01 | ಸರ್ಟಿಫಿಕೇಟ್ ಕೋರ್ಸ್ ಇನ್ ಇಯರ್ ಮೊಲ್ಡ್ ಟೆಕ್ನಾಲಜಿ | 5000 | 60000 |
| 15 | ಕೀಲು ಮತ್ತು ಮೂಳೆ ತಜ್ಞರು (ವಾರಕ್ಕೆ 03 ದಿನಗಳು, ದಿನಕ್ಕೆ ರೂ. 1000/-ಗಳಂತೆ) | 01 | ಪೋಸ್ಟ್ ಗ್ರಾಜುಯೇಷನ್ ಅಥವಾ ಡಿಪ್ಲೋಮ ಇನ್ ಆರ್ಥೋಪೆಡಿಕ್ | 8000 | 96000 |
| 16 | ಆಪ್ತಾಲ್ಮೊಲಜಿಸ್ಟ್ (ವಾರಕ್ಕೆ 03 ದಿನಗಳು, ದಿನಕ್ಕೆ ರೂ. 1000/-ಗಳಂತೆ) | 01 | ಪೋಸ್ಟ್ ಗ್ರಾಜುಯೇಷನ್/ಡಿಪ್ಲೊಮ ಇನ್ ಆಪ್ತಾಲ್ಮೊಲಜಿ | 8000 | 96000 |
| 17 | ಇಎನ್‌ಟಿ ಸ್ಪೆಷಲಿಸ್ಟ್ (ವಾರಕ್ಕೆ 03 ದಿನಗಳು, ದಿನಕ್ಕೆ ರೂ. 1000/-ಗಳಂತೆ | 01 | ಪೋಸ್ಟ್ ಗ್ರಾಜುಯೇಷನ್/ಡಿಪ್ಲೊಮ ಇನ್ ಇ.ಎನ್.ಟಿ. | 8000 | 96000 |
| 18 | ಸೈಕಿಯಾಟ್ರಿಸ್ಟ್ (ವಾರಕ್ಕೆ 03 ದಿನಗಳು, ದಿನಕ್ಕೆ ರೂ. 1000/-ಗಳಂತೆ) | 01 | ಪೋಸ್ಟ್ ಗ್ರಾಜುಯೇಷನ್ ಸೈಕಿಯಾಟ್ರಿ ಮೆಡಿಸಿನ್ | 8000 | 96000 |
| 19 | ಕಟ್ಟಡ ನಿರ್ವಹಣೆ/ಬಾಡಿಗೆ | – | – | 3000 | 36000 |
| 20 | ಪ್ರಯಾಣ ವೆಚ್ಚಗಳು | – | – | 10000 | 120000 |
| 21 | ಕಛೇರಿ ವೆಚ್ಚಗಳು | – | – | 4000 | 48000 |
| 22 | ಲೇಖನ ಸಾಮಗ್ರಿ/ಪೋಸ್ಟೇಜ್ | – | – | 4000 | 48000 |
| 23 | ಇತರೆ ವೆಚ್ಚಗಳು | – | – | 5000 | 60000 |
| | | | | (I) ಒಟ್ಟು ರೂ. | 21,48,000 |
| **II ಅನಾವರ್ತಕ ವೆಚ್ಚಗಳು** | | | | | |
| 1 | ಮೆಷಿನರಿ & ಎಕ್ವಿಪ್‌ಮೆಂಟ್ | | | | 200000 |
| 2 | ಕಂಪ್ಯೂಟರ್ ಮತ್ತು ಪರಿಕರಗಳು | | | | 50000 |
| 3 | ಪೀಠೋಪಕರಣಗಳು | | | | 50000 |
| | | | | (II) ಒಟ್ಟು ರೂ. | 3,00,000 |
| | | | | ಒಟ್ಟು ಮೊತ್ತ (I)+ (II) | 24,48,000 |

**ಬಿ. ಕಮಲಮ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ-2
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ

ಅನುಬಂಧ–2

ಗದಗ ಜಿಲ್ಲಾ ಅಂಗವಿಕಲರ ಪುನರ್ವಸತಿ ಕೇಂದ್ರದ ಅನುಷ್ಠಾನಕ್ಕೆ ಬೇಕಾಗುವ ವಾರ್ಷಿಕ ಆಯವ್ಯಯ

**I ಆವರ್ತಕ ವೆಚ್ಚಗಳು**

| ಕ್ರ. ಸಂ. | ಹುದ್ದೆಗಳ ವಿವರ: ಹುದ್ದೆ | ಸಂಖ್ಯೆ | ವಿದ್ಯಾರ್ಹತೆ ಅನುಭವ | ಮಾಸಿಕ ಗೌರವ ಧನ | ಬೇಕಾಗುವ ವಾರ್ಷಿಕ ಆಯವ್ಯಯ |
|---|---|---|---|---|---|
| 1 | ನೋಡಲ್ ಆಫೀಸರ್/ಸಮಾಜ ಸೇವಾ ಕಾರ್ಯಕರ್ತರು (ಯೂನಿಟ್ ಇನ್‌ಚಾರ್ಜ್) | 01 | ಎಂ.ಎಸ್.ಡಬ್ಲ್ಯೂ ಪುನರ್ವಸತಿ ಸೇವೆ ಅನುಭವ | 15000 | 180000 |
| 2 | ಅಕೌಂಟೆಂಟ್ ಕಂ ಕ್ಲರ್ಕ್ | 01 | ಬಿ.ಕಾಂ. ಪದವಿ ಗಣಕ ಯಂತ್ರದ ಅನುಭವ | 8000 | 96000 |
| 3 | ಸ್ಟೋರ್ ಕೀಪರ್ ಕಂ ಕ್ಲರ್ಕ್ | 01 | ಪದವಿ ಗಣಕ ಯಂತ್ರದ ಅನುಭವ | 6000 | 72000 |
| 4 | ಕಂಪ್ಯೂಟರ್ ಆಪರೇಟರ್ | 01 | ಕಂಪ್ಯೂಟರ್ ಜ್ಞಾನ ಹೊಂದಿರಬೇಕು | 5000 | 60000 |
| 5 | ಕಛೇರಿ ಸೇವಕ | 01 | 7ನೇ ತರಗತಿ | 4000 | 48000 |
| 6 | ರಾತ್ರಿ ಕಾವಲುಗಾರರು | 01 | 7ನೇ ತರಗತಿ | 4000 | 48000 |
| 7 | ಕೃತಕಾಂಗ ಜೋಡಣೆ ಪಿ & ಒ ಅಭಿಯಂತರರು | 01 | ಪಿ & ಒ ಇಂಜಿನಿಯರಿಂಗ್ ಪದವಿ/ಡಿಪ್ಲೋಮ 2 ರಿಂದ 5 ವರ್ಷ ಅನುಭವ | 15000 | 180000 |
| 8 | ಪ್ರಾಸ್ಥೊಟಿಸ್ಟ್ & ಆರ್ಥೋಟಿಸ್ಟ್ | 02 | ಡಿಪ್ಲೊಮ ಇನ್ ಪಿ & ಒ/ಐಟಿಐ (ಫಿಟ್ಟರ್) 2 ವರ್ಷದ ಕ್ಷೇತ್ರ ಮಟ್ಟದ ಅನುಭವ | 10000 | 240000 |
| 9 | ಲೆದರ್ ವರ್ಕರ್/ಷೂ ಮೇಕರ್ | 01 | ಸರ್ಟಿಫಿಕೇಟ್ ಇನ್ ಲೆದರ್ ವರ್ಕಿಂಗ್ & ಷೂ ಮೇಕಿಂಗ್ 2 ವರ್ಷದ ಕ್ಷೇತ್ರ ಮಟ್ಟದ ಅನುಭವ | 5000 | 60000 |
| 10 | ಕ್ಲಿನಿಕಲ್ ಸೈಕಾಲಜಿಸ್ಟ್ (ವಾರಕ್ಕೆ 03 ದಿನಗಳು, ದಿನಕ್ಕೆ ರೂ. 1000/–ಗಳಂತೆ | 01 | ಎಂ. ಎ. ಇನ್ ಕ್ಲಿನಿಕಲ್ ಸೈಕಾಲಜಿ | 12000 | 144000 |
| 11 | ಸ್ಪೀಚ್ ಥೆರಪಿಸ್ಟ್ & ಆಡಿಯಾಲಿಜಿಸ್ಟ್ (ವಾರಕ್ಕೆ ದಿನಗಳು) | 01 | ಡಿಗ್ರಿ ಇನ್ ಸ್ಪೀಚ್ ಪೆಥಾಲಜಿ & ಆಡಿಯಾಲಜಿ | 12000 | 144000 |
| 12 | ಮೊಬಿಲಿಟಿ ಇನ್‌ಸ್ಟ್ರಕ್ಟರ್ | 01 | ಸರ್ಟಿಫಿಕೇಟ್ ಕೋರ್ಸ್ ಇನ್ ಒ & ಎಂ | 5000 | 60000 |
| 13 | ಸ್ಪೆಷಲ್ ಎಜುಕೇಟರ್ (ಹೆಚ್.ಐ., ವಿ.ಐ. ಎಂ.ಅರ್.) | 03 | ಸರ್ಟಿಫಿಕೇಟ್ ಕೋರ್ಸ್ ಇನ್ ಹೆಚ್.ಐ. ವಿ.ಐ. & ಎಂ. ಆರ್. | 5000 | 60000 |
| 14 | ಇಯರ್ ಮೊಲ್ಡ್ ಟೆಕ್ನಿಷಿಯನ್ | 01 | ಸರ್ಟಿಫಿಕೇಟ್ ಕೋರ್ಸ್ ಇನ್ ಇಯರ್ ಮೊಲ್ಡ್ ಟೆಕ್ನಾಲಜಿ | 5000 | 60000 |
| 15 | ಕೀಲು ಮತ್ತು ಮೂಳೆ ತಜ್ಞರು (ವಾರಕ್ಕೆ 03 ದಿನಗಳು, ದಿನಕ್ಕೆ ರೂ. 1000/–ಗಳಂತೆ | 01 | ಪೋಸ್ಟ್ ಗ್ರಾಜುಯೇಷನ್ ಅಥವಾ ಡಿಪ್ಲೋಮ ಇನ್ ಆರ್ಥೋಪೆಡಿಕ್ | 8000 | 96000 |
| 16 | ಆಪ್ತಾಲ್ಮೊಲಜಿಸ್ಟ್ (ವಾರಕ್ಕೆ 03 ದಿನಗಳು, ದಿನಕ್ಕೆ ರೂ. 1000/–ಗಳಂತೆ) | 01 | ಪೋಸ್ಟ್ ಗ್ರಾಜುಯೇಷನ್/ಡಿಪ್ಲೋಮ ಇನ್ ಆಪ್ತಾಲ್ಮೊಲಜಿ | 8000 | 96000 |
| 17 | ಇಎನ್‌ಟಿ ಸ್ಪೆಷಲಿಸ್ಟ್ (ವಾರಕ್ಕೆ 03 ದಿನಗಳು, ದಿನಕ್ಕೆ ರೂ. 1000/–ಗಳಂತೆ | 01 | ಪೋಸ್ಟ್ ಗ್ರಾಜುಯೇಷನ್/ಡಿಪ್ಲೋಮ ಇನ್ ಇ.ಎನ್.ಟಿ. | 8000 | 96000 |
| 18 | ಸೈಕಿಯಾಟ್ರಿಸ್ಟ್ (ವಾರಕ್ಕೆ 03 ದಿನಗಳು, ದಿನಕ್ಕೆ ರೂ. 1000/–ಗಳಂತೆ) | 01 | ಪೋಸ್ಟ್ ಗ್ರಾಜುಯೇಷನ್ ಸೈಕಿಯಾಟ್ರಿ ಮೆಡಿಸಿನ್ | 8000 | 96000 |
| 19 | ಕಟ್ಟಡ ನಿರ್ವಹಣೆ/ಬಾಡಿಗೆ | – | – | 3000 | 36000 |
| 20 | ಪ್ರಯಾಣ ವೆಚ್ಚಗಳು | – | – | 10000 | 120000 |
| 21 | ಕಛೇರಿ ವೆಚ್ಚಗಳು | – | – | 4000 | 48000 |
| 22 | ಲೇಖನ ಸಾಮಗ್ರಿ/ಪೋಸ್ಟೇಜ್ | – | – | 4000 | 48000 |
| 23 | ಇತರೆ ವೆಚ್ಚಗಳು | – | – | 5000 | 60000 |
| | | | | (I) ಒಟ್ಟು ರೂ. | 21,48,000 |

**II ಆನಾವರ್ತಕ ವೆಚ್ಚಗಳು**

| ಕ್ರ. ಸಂ. | ವಿವರ | | | | ಮೊತ್ತ |
|---|---|---|---|---|---|
| 1 | ಮೆಷಿನರಿ & ಎಕ್ವಿಪ್‌ಮೆಂಟ್ಸ್ | | | | 500000 |
| 2 | ಕಂಪ್ಯೂಟರ್ ಮತ್ತು ಪರಿಕರಗಳು | | | | 50000 |
| 3 | ಪೀಠೋಪಕರಣಗಳು | | | | 50000 |
| | | | | (II) ಒಟ್ಟು ರೂ. | 6,00,000 |
| | | | | ಒಟ್ಟು ಮೊತ್ತ (I)+ (II) | 27,48,000 |

**ಬಿ. ಕಮಲಮ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ–2

ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ

ಅನುಬಂಧ–3

ರಾಯಚೂರು ಜಿಲ್ಲಾ ಅಂಗವಿಕಲರ ಪುನರ್ವಸತಿ ಕೇಂದ್ರದ ಅನುಷ್ಠಾನಕ್ಕೆ ಬೇಕಾಗುವ ವಾರ್ಷಿಕ ಆಯವ್ಯಯ

| I ಆವರ್ತಕ ವೆಚ್ಚಗಳು | | | | | |
|---|---|---|---|---|---|
| ಕ್ರ. ಸಂ. | ಹುದ್ದೆಗಳ ವಿವರ | | | ಮಾಸಿಕ ಗೌರವ ಧನ | ಬೇಕಾಗುವ ವಾರ್ಷಿಕ ಆಯವ್ಯಯ |
| | ಹುದ್ದೆ | ಸಂಖ್ಯೆ | ವಿದ್ಯಾರ್ಹತೆ ಅನುಭವ | | |
| 1 | ನೋಡಲ್ ಆಫೀಸರ್/ಸಮಾಜ ಸೇವಾ ಕಾರ್ಯಕರ್ತರು (ಯೂನಿಟ್ ಇನ್‌ಚಾರ್ಜ್) | 01 | ಎಂ.ಎಸ್.ಡಬ್ಲ್ಯೂ ಪುನರ್ವಸತಿ ಸೇವೆ ಅನುಭವ | 15000 | 180000 |
| 2 | ಅಕೌಂಟೆಂಟ್ ಕಂ ಕ್ಲರ್ಕ್ | 01 | ಬಿ.ಕಾಂ. ಪದವಿ ಗಣಕ ಯಂತ್ರದ ಅನುಭವ | 8000 | 96000 |
| 3 | ಸ್ಟೋರ್ ಕೀಪರ್ ಕಂ ಕ್ಲರ್ಕ್ | 01 | ಪದವಿ ಗಣಕ ಯಂತ್ರದ ಅನುಭವ | 6000 | 72000 |
| 4 | ಕಂಪ್ಯೂಟರ್ ಆಪರೇಟರ್ | 01 | ಕಂಪ್ಯೂಟರ್ ಜ್ಞಾನ ಹೊಂದಿರಬೇಕು | 5000 | 60000 |
| 5 | ಕಛೇರಿ ಸೇವಕ | 01 | 7ನೇ ತರಗತಿ | 4000 | 48000 |
| 6 | ರಾತ್ರಿ ಕಾವಲುಗಾರರು | 01 | 7ನೇ ತರಗತಿ | 4000 | 48000 |
| 7 | ಕೃತಕಾಂಗ ಜೋಡಣೆ ಪಿ & ಒ ಅಭಿಯಂತರರು | 01 | ಪಿ & ಒ ಇಂಜಿನಿಯರಿಂಗ್ ಪದವಿ/ಡಿಪ್ಲೋಮ 2 ರಿಂದ 5 ವರ್ಷ ಅನುಭವ | 15000 | 180000 |
| 8 | ಪ್ರಾಸ್ಟೋಟಿಸ್ಟ್ & ಆರ್ಥೋಟಿಸ್ಟ್ | 02 | ಡಿಪ್ಲೋಮ ಇನ್ ಪಿ & ಒ/ಐಟಿಐ (ಫಿಟ್ಟರ್) 2 ವರ್ಷದ ಕ್ಷೇತ್ರ ಮಟ್ಟದ ಅನುಭವ | 10000 | 240000 |
| 9 | ಲೆದರ್ ವರ್ಕರ್/ಷೂ ಮೇಕರ್ | 01 | ಸರ್ಟಿಫಿಕೇಟ್ ಇನ್ ಲೆದರ್ ವರ್ಕಿಂಗ್ & ಷೂ ಮೇಕಿಂಗ್ 2 ವರ್ಷದ ಕ್ಷೇತ್ರ ಮಟ್ಟದ ಅನುಭವ | 5000 | 60000 |
| 10 | ಕ್ಲಿನಿಕಲ್ ಸೈಕಾಲಜಿಸ್ಟ್ (ವಾರಕ್ಕೆ 03 ದಿನಗಳು, ದಿನಕ್ಕೆ ರೂ. 1000/–ಗಳಂತೆ | 01 | ಎಂ. ಎ. ಇನ್–ಕ್ಲಿನಿಕಲ್ ಸೈಕಾಲಜಿ | 12000 | 144000 |
| 11 | ಸ್ಪೀಚ್ ಥೆರಪಿಸ್ಟ್ & ಆಡಿಯಾಲಿಜಿಸ್ಟ್ (ವಾರಕ್ಕೆ ದಿನಗಳು) | 01 | ಡಿಗ್ರಿ ಇನ್ ಸ್ಪೀಚ್ ಪೆಥಾಲಜಿ & ಆಡಿಯಾಲಜಿ | 12000 | 144000 |
| 12 | ಮೊಬಿಲಿಟಿ ಇನ್‌ಸ್ಟ್ರಕ್ಟರ್ | 01 | ಸರ್ಟಿಫಿಕೇಟ್ ಕೋರ್ಸ್ ಇನ್ ಒ & ಎಂ | 5000 | 60000 |
| 13 | ಸ್ಪೆಷಲ್ ಎಜುಕೇಟರ್ (ಹೆಚ್.ಐ., ವಿ.ಐ. ಎಂ.ಅರ್.) | 03 | ಸರ್ಟಿಫಿಕೇಟ್ ಕೋರ್ಸ್ ಇನ್ ಹೆಚ್.ಐ. ವಿ.ಐ. & ಎಂ. ಆರ್. | 5000 | 60000 |
| 14 | ಇಯರ್ ಮೋಲ್ಡ್ ಟಿಕ್ನಿಷಿಯನ್ | 01 | ಸರ್ಟಿಫಿಕೇಟ್ ಕೋರ್ಸ್ ಇನ್ ಇಯರ್ ಮೋಲ್ಡ್ ಟೆಕ್ನಾಲಜಿ | 5000 | 60000 |
| 15 | ಕೀಲು ಮತ್ತು ಮೂಳೆ ತಜ್ಞರು (ವಾರಕ್ಕೆ 03 ದಿನಗಳು, ದಿನಕ್ಕೆ ರೂ. 1000/–ಗಳಂತೆ | 01 | ಪೋಸ್ಟ್ ಗ್ರಾಜುಯೇಷನ್ ಅಥವಾ ಡಿಪ್ಲೋಮ ಇನ್ ಆರ್ಥೋಪೆಡಿಕ್ಸ್ | 8000 | 96000 |
| 16 | ಆಪ್ತಾಲ್ಮೊಲಜಿಸ್ಟ್ (ವಾರಕ್ಕೆ 03 ದಿನಗಳು, ದಿನಕ್ಕೆ ರೂ. 1000/–ಗಳಂತೆ) | 01 | ಪೋಸ್ಟ್ ಗ್ರಾಜುಯೇಷನ್/ಡಿಪ್ಲೋಮ ಇನ್ ಆಪ್ತಾಲ್ಮೊಲಜಿ | 8000 | 96000 |
| 17 | ಇಎನ್‌ಟಿ ಸ್ಪೆಷಲಿಸ್ಟ್ (ವಾರಕ್ಕೆ 03 ದಿನಗಳು, ದಿನಕ್ಕೆ ರೂ. 1000/–ಗಳಂತೆ | 01 | ಪೋಸ್ಟ್ ಗ್ರಾಜುಯೇಷನ್/ಡಿಪ್ಲೋಮ ಇನ್ ಇ.ಎನ್.ಟಿ. | 8000 | 96000 |
| 18 | ಸೈಕಿಯಾಟ್ರಿಸ್ಟ್ (ವಾರಕ್ಕೆ 03 ದಿನಗಳು, ದಿನಕ್ಕೆ ರೂ. 1000/–ಗಳಂತೆ) | 01 | ಪೋಸ್ಟ್ ಗ್ರಾಜುಯೇಷನ್ ಸೈಕಿಯಾಟ್ರಿ ಮೆಡಿಸಿನ್ | 8000 | 96000 |
| 19 | ಕಟ್ಟಡ ನಿರ್ವಹಣೆ/ಬಾಡಿಗೆ | – | – | 3000 | 36000 |
| 20 | ಪ್ರಯಾಣ ವೆಚ್ಚಗಳು | – | – | 10000 | 120000 |
| 21 | ಕಛೇರಿ ವೆಚ್ಚಗಳು | – | – | 4000 | 48000 |
| 22 | ಲೇಖನ ಸಾಮಗ್ರಿ/ಪೋಸ್ಟೇಜ್ | – | – | 4000 | 48000 |
| 23 | ಇತರೆ ವೆಚ್ಚಗಳು | – | – | 5000 | 60000 |
| | | | | (III) ಒಟ್ಟು ರೂ. | 21,48,000 |
| II ಅನಾವರ್ತಕ ವೆಚ್ಚಗಳು | | | | | |
| 1 | ಮೆಷಿನರಿ & ಎಕ್ವಿಪ್‌ಮೆಂಟ್ಸ್ | | | | 500000 |
| 2 | ಕಂಪ್ಯೂಟರ್ ಮತ್ತು ಪರಿಕರಗಳು | | | | 50000 |
| 3 | ಪೀಠೋಪಕರಣಗಳು | | | | 50000 |
| | | | | (II) ಒಟ್ಟು ರೂ. | 6,00,000 |
| | | | | ಒಟ್ಟು ಮೊತ್ತ (I)+ (II) | 27,48,000 |

**ಬಿ. ಕಮಲಮ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ–2
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ

ಪಿ.ಆರ್. ನಂ. 1323

## ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯ

### ಸುತ್ತೋಲೆ

ಸಂಖ್ಯೆ: ಮಮಇ/115/ಪಿಹೆಚ್‌ಪಿ/2010, ಬೆಂಗಳೂರು, ದಿನಾಂಕ 05–05–2011

**ವಿಷಯ** : ಅಂಗವಿಕಲತೆ ಹೊಂದುವ ವ್ಯಕ್ತಿಯನ್ನು ಕೆಲಸದಿಂದ ತೆಗೆದು ಹಾಕದೇ ಇರುವ ಬಗ್ಗೆ ಅಥವಾ ಅವರ ದರ್ಜೆಯನ್ನು ಇಳಿಸದೇ ಇರುವ ಬಗ್ಗೆ ಸೂಚನೆಗಳು.

**ಉಲ್ಲೇಖ** : ರಾಜ್ಯ ಆಯುಕ್ತರು, ಅಂಗವಿಕಲರ ಅಧಿನಿಯಮ, ಬೆಂಗಳೂರು ಇವರ ದಿನಾಂಕ 06–02–2010 ಮತ್ತು 22–12–2010ರ ಪತ್ರಗಳು.

ಅಂಗವಿಕಲ ವ್ಯಕ್ತಿಗಳ (ಸಮಾನ ಅವಕಾಶ, ಹಕ್ಕುಗಳ ಸಂರಕ್ಷಣೆ ಮತ್ತು ಪೂರ್ಣ ಭಾಗವಹಿಸುವಿಕೆ) ಅಧಿನಿಯಮ, 1995ನ್ನು ದಿನಾಂಕ 01–01–1996ರ ಭಾರತೀಯ ರಾಜ್ಯ ಪತ್ರದಲ್ಲಿ ಪ್ರಕಟಿಸಲಾಗಿದೆ.

**ಸದರಿ ಅಧಿನಿಯಮದ ಕಲಂ 47ನ್ನು ಈ ಕೆಳಗೆ ಉಚ್ಛರಿಸಿದೆ:–**

47. ಸರ್ಕಾರಿ ಉದ್ಯೋಗದಲ್ಲಿ ಪಕ್ಷಪಾತ ಮಾಡಕೂಡದು:–

1) ಯಾವುದೇ ಸಂಸ್ಥೆಯ ಸೇವೆಯಲ್ಲಿರುವಾಗ ಅಂಗವಿಕಲತೆ ಹೊಂದುವ ವ್ಯಕ್ತಿಯನ್ನು ಕೆಲಸದಿಂದ ತೆಗೆದುಹಾಕತಕ್ಕದ್ದಲ್ಲ ಅಥವಾ ದರ್ಜೆಯನ್ನು ಇಳಿಸತಕ್ಕದ್ದಲ್ಲ.

"ಆದರೆ ಒಬ್ಬ ನೌಕರನು ಅಂಗವಿಕಲತೆ ಹೊಂದಿದ ನಂತರ ಅವನು ಹೊಂದಿರುವ ಹುದ್ದೆಯು ಅವನಿಗೆ ಸೂಕ್ತವೆನಿಸದಿದ್ದ ಪಕ್ಷದಲ್ಲಿ, ಅದೇ ವೇತನ ಶ್ರೇಣಿ ಮತ್ತು ಸೇವಾ ಸೌಕರ್ಯಗಳೊಂದಿಗೆ ಇತರೆ ಹುದ್ದೆಗೆ ಅವರನ್ನು ಸ್ಥಳಾಂತರಿಸಬಹುದು.

ಆದರೆ, ಅಂಥ ನೌಕರನನ್ನು ಯಾವುದೇ ಇತರ ಹುದ್ದೆಗೆ ಹೊಂದಿಸುವುದು ಸಾಧ್ಯವಾಗದಿದ್ದಲ್ಲಿ ಅವರನ್ನು ಸೂಕ್ತ ಹುದ್ದೆ ದೊರೆಯುವವರೆಗೆ ಸಂಖ್ಯಾತಿರಿಕ್ತ (ಸೂಪರ್ ನ್ಯೂಮರರಿ) ಹುದ್ದೆಯಲ್ಲಿ ಅಥವಾ ಸೇವಾ ನಿವೃತ್ತಿ ವಯಸ್ಸು ಹೊಂದುವವರೆಗೆ ಇದರಲ್ಲಿ ಯಾವುದು ಮೊದಲಾಗುವುದೋ ಅಲ್ಲಿಯವರೆಗೆ ಹಾಗೆಯೇ ಇರಿಸಿಕೊಳ್ಳತಕ್ಕದ್ದು"

2) ಅಂಗವಿಕಲನೆಂಬ ಕಾರಣಕ್ಕಾಗಿ ಆ ವ್ಯಕ್ತಿಗೆ ಯಾವುದೇ ಬಡ್ತಿಯನ್ನು ನಿರಾಕರಿಸತಕ್ಕದ್ದಲ್ಲ.

"ಆದರೆ ಸಮುಚಿತ ಸರ್ಕಾರ, ಯಾವುದೇ ಸಂಸ್ಥೆಯಲ್ಲಿ ಕೆಲಸ ನಿರ್ವಹಿಸುತ್ತಿರುವುದನ್ನು ಗಮನದಲ್ಲಿಟ್ಟುಕೊಂಡು ಅಧಿಸೂಚನೆ ಮೂಲಕ ಮತ್ತು ಅಂಥ ಷರತ್ತುಗಳೇನಾದರೂ ಇದ್ದರೆ ಅವುಗಳನ್ನು ಈ ಅಧಿಸೂಚನೆಯಲ್ಲಿ ನಮೂದಿಸುವುದಕ್ಕೆ ಒಳಪಟ್ಟು ಈ ಪ್ರಕರಣದ ಉಪಬಂಧಗಳಿಂದ ಯಾವುದೇ ಕಾರ್ಯಸಂಸ್ಥೆಗೆ ವಿನಾಯಿತಿ ನೀಡಬಹುದು.

ಅಂಗವಿಕಲ ವ್ಯಕ್ತಿಗಳ (ಸಮಾನ ಅವಕಾಶ ಹಕ್ಕುಗಳ ಸಂರಕ್ಷಣೆ ಮತ್ತು ಪೂರ್ಣ ಭಾಗವಹಿಸುವಿಕೆ) ಅಧಿನಿಯಮ 1995ರಲ್ಲಿ ಅಂಗವಿಕಲತೆ ಹೊಂದುವ ನೌಕರರ ಹಕ್ಕುಗಳನ್ನು ಸಂರಕ್ಷಿಸುವ ಬಗ್ಗೆ ಸ್ಪಷ್ಟವಾಗಿ ತಿಳಿಸಲಾಗಿದ್ದು, ಸೇವೆಯಲ್ಲಿದ್ದಾಗ ಶಾರೀರಿಕ ಅಂಗವಿಕಲತೆಗೆ ಒಳಗಾದ ಸಿಬ್ಬಂದಿಗಳಿಂದ ಅನೇಕ ದೂರುಗಳನ್ನು ಸ್ವೀಕರಿಸಲಾಗುತ್ತಿದ್ದು, ರಾಜ್ಯ ಆಯುಕ್ತರ ನ್ಯಾಯಾಲಯದಲ್ಲಿ ಪ್ರಕರಣಗಳನ್ನು ದಾಖಲಿಸಿ ಅಂಗವಿಕಲರ ಅಧಿನಿಯಮ 1995ರ ಕಲಂ 47ರ ರೀತ್ಯ ಕ್ರಮ ಕೈಗೊಳ್ಳುವಂತೆ ಆದೇಶಿಸಲಾಗುತ್ತಿದೆ. ಈ ಆದೇಶಗಳನ್ನು ಸಂಬಂಧಿಸಿದ ಇಲಾಖೆ/ಸಂಸ್ಥೆಗಳು ಪಾಲಿಸಲು ವಿಳಂಬ ಮಾಡುತ್ತಿರುವುದಾಗಿ ತಿಳಿದುಬಂದಿದೆ ಮುಂದುವರೆದು, ಆಯುಕ್ತರ ನ್ಯಾಯಾಲಯದ ಆದೇಶವನ್ನು ಪಾಲಿಸುವ ಬಗ್ಗೆ ಸರ್ಕಾರದ ಅನುಮತಿ/ಸ್ಪಷ್ಟೀಕರಣ ಕೋರುತ್ತಿರುವುದರಿಂದ, ಸರ್ಕಾರದ ಅನುಮತಿ/ಸ್ಪಷ್ಟೀಕರಣ ಬರುವವರೆಗೆ ಅಂಗವಿಕಲತೆ ಹೊಂದಿದ ವ್ಯಕ್ತಿಯು ವೇತನವಿಲ್ಲದೆ ತೊಂದರೆ ಅನುಭವಿಸುವಂತಾಗುತ್ತದೆ.

ಅಂಗವಿಕಲ ವ್ಯಕ್ತಿಗಳ (ಸಮಾನ ಅವಕಾಶ, ಹಕ್ಕುಗಳ ಸಂರಕ್ಷಣೆ ಮತ್ತು ಪೂರ್ಣ ಭಾಗವಹಿಸುವಿಕೆ) ಅಧಿನಿಯಮ, 1995ನ್ನು ಭಾರತ ಸರ್ಕಾರವು ಹೊರಡಿಸಿದ್ದು, ಸದರಿ ಅಧಿನಿಯಮದ ಕಲಂ 63(2)ರ ಮೇರೆಗೆ ರಾಜ್ಯ ಆಯುಕ್ತರು ಅಂಗವಿಕಲರ ಅಧಿನಿಯಮ ಇವರ ಮುಂದೆ ಇರುವ ಪ್ರತಿಯೊಂದು ವ್ಯವಹರಣೆಯು ಭಾರತೀಯ ದಂಡ ಸಂಹಿತೆಯ 193 ಮತ್ತು 228ನೇ ಪ್ರಕರಣದ ಅರ್ಥವ್ಯಾಪ್ತಿಯೊಳಗೆ ನ್ಯಾಯಿಕ ವ್ಯವಹರಣೆಯಾಗಿರತಕ್ಕದ್ದು ಮತ್ತು ಮುಖ್ಯ ಆಯುಕ್ತರು ಆಯುಕ್ತರುಗಳು ಸಕ್ಷಮ ಪ್ರಾಧಿಕಾರ ಇವರುಗಳನ್ನು 195ನೇ ಪ್ರಕರಣದ ಮತ್ತು ಕ್ರಿಮಿನಲ್ ಪ್ರಕ್ರಿಯಾ ಸಂಹಿತೆ, 1972ರ 26 ಅಧ್ಯಾಯದ ಉದ್ದೇಶಕ್ಕಾಗಿ ಸಿವಿಲ್ ನ್ಯಾಯಾಲಯವೆಂದು ಭಾವಿಸತಕ್ಕದ್ದು.

ಈ ಹಿನ್ನೆಲೆಯಲ್ಲಿ ಅಂಗವಿಕಲತೆ ಹೊಂದುವ ನೌಕರರನ್ನು ಕೆಲಸದಿಂದ ತೆಗೆದು ಹಾಕತಕ್ಕದ್ದಲ್ಲ ಅಥವಾ ಅವರ ದರ್ಜೆಯನ್ನು ಇಳಿಸತಕ್ಕದ್ದಲ್ಲ ಎನ್ನುವ ಅಂಗವಿಕಲ ವ್ಯಕ್ತಿಗಳ (ಸಮಾನ ಅವಕಾಶ, ಹಕ್ಕುಗಳ ಸಂರಕ್ಷಣೆ ಮತ್ತು ಪೂರ್ಣ ಭಾಗವಹಿಸುವಿಕೆ) ಅಧಿನಿಯಮ 1995ರ ಕಲಂ 47ನ್ನು ಯಾವುದೇ ದೂರಿಗೆ ಅವಕಾಶವಿಲ್ಲದಂತೆ ಕಟ್ಟುನಿಟ್ಟಾಗಿ ಪಾಲಿಸುವಂತೆ ಸರ್ಕಾರದ ಎಲ್ಲಾ ಇಲಾಖೆಗಳ ಪ್ರಧಾನ ಕಾರ್ಯದರ್ಶಿಗಳು/ಕಾರ್ಯದರ್ಶಿಗಳಿಗೆ ತಿಳಿಸಲಾಗಿದೆ ಹಾಗೂ ಈ ಸೂಚನೆಗಳನ್ನು ಸಂಬಂಧಪಟ್ಟ ಇಲಾಖೆಗಳಡಿ ಬರುವ ಇಲಾಖಾ ಮುಖ್ಯಸ್ಥರುಗಳು/ನಿಗಮ/ಮಂಡಳಿ ಮತ್ತು ಸ್ಥಳೀಯ ಸಂಸ್ಥೆಗಳು ಕಟ್ಟುನಿಟ್ಟಾಗಿ ಪಾಲಿಸುವಂತೆ ಸೂಚನೆಗಳನ್ನು ನೀಡುವಂತೆ ಕೋರಲಾಗಿದೆ.

**ಸಿ. ಎನ್. ಸೀತಾರಾಮ್**
ಸರ್ಕಾರದ ಕಾರ್ಯದರ್ಶಿ
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ

ಪಿ.ಆರ್. ನಂ. 1324

## ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯ

**ವಿಷಯ :** ಅಂಗವಿಕಲರ ಹಾಗೂ ಹಿರಿಯ ನಾಗರಿಕರ ಕಲ್ಯಾಣ ಇಲಾಖೆಯನ್ನು "ವಿಕಲಚೇತನರ ಹಾಗೂ ಹಿರಿಯ ನಾಗರಿಕರ ಸಬಲೀಕರಣ ಇಲಾಖೆ" ಎಂದು ಮರುನಾಮಕರಣ ಮಾಡುವ ಬಗ್ಗೆ:–

**ಓದಲಾಗಿದೆ :** ನಿರ್ದೇಶಕರು, ಅಂಗವಿಕಲರ ಹಾಗೂ ಹಿರಿಯ ನಾಗರಿಕರ ಕಲ್ಯಾಣ ಇಲಾಖೆ ಇವರ ಪತ್ರ ಸಂಖ್ಯೆ: ನಿಅಕಇ/2010–11/2106, ದಿನಾಂಕ 11–01–2011.

**ಪ್ರಸ್ತಾವನೆ :**

ಮೇಲೆ ಓದಲಾದ ಪತ್ರದಲ್ಲಿ ನಿರ್ದೇಶಕರು, ಅಂಗವಿಕಲರ ಹಾಗೂ ಹಿರಿಯ ನಾಗರಿಕರ ಕಲ್ಯಾಣ ಇಲಾಖೆ ಇವರು ಅಂಗವಿಕಲರ ಹಾಗೂ ಹಿರಿಯ ನಾಗರಿಕರ ಕಲ್ಯಾಣ ಇಲಾಖೆಯು 1988ರಿಂದ ಪ್ರತ್ಯೇಕವಾಗಿ ಅಸ್ತಿತ್ವಕ್ಕೆ ಬಂದಿದ್ದು, ಅಂಗವಿಕಲರನ್ನು ಸಬಲೀಕರಣಗೊಳಿಸಿ ಸಮಾಜದ ಮುಖ್ಯವಾಹಿನಿಯಲ್ಲಿ ಕೊಂಡೊಯ್ಯುವ ಘನ ಉದ್ದೇಶವನ್ನು ಹೊಂದಿದ್ದು, ಅಂಗವಿಕಲರ ಸರ್ವತೋಮುಖ ಅಭಿವೃದ್ಧಿಗಾಗಿ ಹಲವಾರು ಕಲ್ಯಾಣ ಕಾರ್ಯಕ್ರಮಗಳನ್ನು ರೂಪಿಸಿ, ಅವರಲ್ಲಿನ ಕೀಳರಿಮೆಯನ್ನು ತೊಡೆದು ಅವರಿಗೆ ಅವಕಾಶ ನೀಡಿ ಆರ್ಥಿಕ, ಸಾಮಾಜಿಕ, ದೈಹಿಕ, ಮಾನಸಿಕವಾಗಿ ಸಬಲೀಕರಣಗೊಳಿಸಲಾಗುತ್ತಿದೆ. U. N. Convention ನಲ್ಲಿ ಅಂಗವಿಕಲರು ಎಂಬ ಪದದ ಬದಲಿಗೆ ವಿಕಲಚೇತನರೆಂದು ಬಳಸಲಾಗಿದ್ದು, ಇದನ್ನು ಎಲ್ಲರೂ ಅನುಸರಿಸಬೇಕಾಗುತ್ತದೆ. ಅಲ್ಲದೆ ಸಂಘ ಸಂಸ್ಥೆಗಳೂ ಸಹ ಅಂಗವಿಕಲ ಪದವನ್ನು ತೊಡೆದುಹಾಕಿ ವಿಕಲಚೇತನರೆಂದು ಬಳಸಲು ಬೇಡಿಕೆಗಳು ಸ್ವೀಕೃತವಾಗುತ್ತಿದ್ದು, . U. N. Convention ಅನುಸಾರ ವಿಕಲಚೇತನರ ಸಬಲೀಕರಣ ಇಲಾಖೆ ಎಂದು ಮರುನಾಮಕರಣ ಮಾಡಿದಲ್ಲಿ ವಿಕಲಚೇತನರಿಗೆ ಸ್ಫೂರ್ತಿ ನೀಡಿದಂತಾಗುವುದಲ್ಲದೇ ನ್ಯಾಯಸಮ್ಮತವೂ ಆಗಿರುತ್ತದೆಂದು ತಿಳಿಸಿರುತ್ತಾರೆ. ಈಗಾಗಲೇ ಇತರ ರಾಜ್ಯಗಳಲ್ಲಿ ವಿಕಲಚೇತನರ ಇಲಾಖೆಯೆಂದು ಮರುನಾಮಕರಣ ಮಾಡಿದ್ದು ವಿಶ್ವ ಅಂಗವಿಕಲರ ದಿನಾಚರಣೆ–2010ರ ಸಮಾರಂಭದಲ್ಲಿ ಸನ್ಮಾನ್ಯ ಮುಖ್ಯಮಂತ್ರಿಯವರು . U. N. Convention ಅನುಸಾರ ಇಲಾಖೆಯನ್ನು ವಿಕಲಚೇತನರ ಸಬಲೀಕರಣ ಇಲಾಖೆ ಎಂಬುದಾಗಿ ಮರುನಾಮಕರಣ ಮಾಡುವ ಬಗ್ಗೆ ಸಕಾರಾತ್ಮಕವಾಗಿ ಸಮ್ಮತಿಸಿ ಘೋಷಿಸಿದ್ದು, ಇಲಾಖೆಯ ಹೆಸರನ್ನು "ವಿಕಲಚೇತನರ ಹಾಗೂ ಹಿರಿಯ ನಾಗರೀಕರ ಸಬಲೀಕರಣ ಇಲಾಖೆ" ಎಂದು ಮರುನಾಮಕರಣ ಮಾಡಿ ಆದೇಶ ಹೊರಡಿಸುವಂತೆ ಕೋರಿರುತ್ತಾರೆ.

ನಿರ್ದೇಶಕರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಮಮಇ 41 ಪಿಎಚ್‌ಪಿ 2011, ಬೆಂಗಳೂರು, ದಿನಾಂಕ : 17–05–2011**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಲಾದ ಹಿನ್ನೆಲೆಯಲ್ಲಿ ತಕ್ಷಣದಿಂದ ಜಾರಿಗೆ ಬರುವಂತೆ "ಅಂಗವಿಕಲರ ಹಾಗೂ ಹಿರಿಯ ನಾಗರಿಕರ ಕಲ್ಯಾಣ ಇಲಾಖೆ"ಯನ್ನು "ವಿಕಲಚೇತನರ ಹಾಗೂ ಹಿರಿಯ ನಾಗರಿಕರ ಸಬಲೀಕರಣ ಇಲಾಖೆ" . "Department for the Empowerment of Differently Abled and Senior Citizens" ಎಂದು ಮರುನಾಮಕರಣ ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಬಿ. ಕಮಲಮ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ–2
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ

ಪಿ.ಆರ್. ನಂ. 1325

## ಶಿಕ್ಷಣ ಸಚಿವಾಲಯ

**ವಿಷಯ :** ಕರ್ನಾಟಕ ರಾಜ್ಯದಲ್ಲಿನ ವೃತ್ತಿ ಆಧಾರಿತ ಕೋರ್ಸುಗಳಲ್ಲಿ ಕಾರ್ಯ ನಿರ್ವಹಿಸುತ್ತಿರುವ ಅರೆಕಾಲಿಕ ಬೋಧಕರ/ಬೋಧಕೇತರರ ಹೆಸರುಗಳನ್ನು ರಾಜ್ಯ ಸರ್ಕಾರಕ್ಕೆ ಶಿಫಾರಸ್ಸು ಮಾಡುವ ಸಲುವಾಗಿ ಪರಿಶೀಲನಾ ಸಮಿತಿಯನ್ನು ರಚಿಸುವ ಬಗ್ಗೆ.

**ಓದಲಾಗಿದೆ :** (1) ದಿನಾಂಕ 06–04–2011ರ ಅಧಿಸೂಚನೆ ಸಂಖ್ಯೆ: ಸಂವ್ಯಶಾಇ 22 ಶಾಸನ 2011,
(2) ದಿನಾಂಕ 12–04–2011ರ ವೃತ್ತಿ ಶಿಕ್ಷಣ ಇಲಾಖೆಯ ನಿರ್ದೇಶಕರ ಏಕ ಕಡತ ಸಂಖ್ಯೆ: ಡಿವಿಇ/ಆವಿ2/ಏಕಕಡತ/192/2004–05.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ಅಧಿಸೂಚನೆಯಲ್ಲಿ ಕರ್ನಾಟಕ ಅರೆಕಾಲಿಕ ವೃತ್ತಿ ಆಧಾರಿತ ಕೋರ್ಸುಗಳ ನೌಕರರನ್ನು ವಿಲೀನಗೊಳಿಸುವ ಅಧಿನಿಯಮ 2011ನ್ನು ದಿನಾಂಕ 06–04–2011 ರಿಂದ ಜಾರಿಗೆ ಬರುವಂತೆ ಪ್ರಕಟಿಸಲಾಗಿದೆ. ಅದರಂತೆ, ಸದರಿ ಅಧಿನಿಯಮದ 4ನೇ ಪ್ರಕರಣದ (1) ಮತ್ತು (2)ನೇ ಉಪ–ಪ್ರಕರಣದನ್ವಯ ಅರೆಕಾಲಿಕ ವೃತ್ತಿ ಆಧಾರಿತ ಕೋರ್ಸುಗಳ ನೌಕರರ ವಿಲೀನಕ್ಕೆ ಸಂಬಂಧಿಸಿದ ಪ್ರಕ್ರಿಯೆಯನ್ನು ಪ್ರಾರಂಭಿಸಲು ಸಮಿತಿಯನ್ನು ರಚಿಸಲು ಉದ್ದೇಶಿಸಲಾಗಿದೆ. ಅದರಂತೆ, ಮೇಲೆ (2)ರಲ್ಲಿ ಓದಲಾದ ಏಕ ಕಡತದಲ್ಲಿ ವೃತ್ತಿ ಶಿಕ್ಷಣ ಇಲಾಖೆಯ ನಿರ್ದೇಶಕರು ಸಮಿತಿಯನ್ನು ರಚಿಸುವ ಸಲುವಾಗಿ ಸಲ್ಲಿಸಿರುವ ಏಕ ಕಡತದಲ್ಲಿನ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ಇಡಿ 35 ಟಿವಿಇ 2011, ಬೆಂಗಳೂರು, ದಿನಾಂಕ : 13–05–2011**

ಕರ್ನಾಟಕ ಅರೆಕಾಲಿಕ ವೃತ್ತಿ ಆಧಾರಿತ ಕೋರ್ಸುಗಳ ನೌಕರರನ್ನು ವಿಲೀನಗೊಳಿಸುವ ಅಧಿನಿಯಮ 2011ರ (ಕರ್ನಾಟಕ ಅಧಿನಿಯಮ ಸಂಖ್ಯೆ: 22) 4ನೇ ಪ್ರಕರಣದ (1) ಮತ್ತು (2)ನೇ ಉಪ–ಪ್ರಕರಣದಲ್ಲಿರುವ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ರಾಜ್ಯ ಸರ್ಕಾರವು ರಾಜ್ಯದಲ್ಲಿರುವ ಪದವಿ ಪೂರ್ವ ಶಿಕ್ಷಣದಲ್ಲಿರುವ ವೃತ್ತಿ ಆಧಾರಿತ ಕೋರ್ಸುಗಳಲ್ಲಿ ಕಾರ್ಯ ನಿರ್ವಹಿಸುತ್ತಿರುವ ಅರೆಕಾಲಿಕ ವೃತ್ತಿ ಆಧಾರಿತ ಕೋರ್ಸುಗಳ ಬೋಧಕ ಹಾಗೂ ಬೋಧಕೇತರ ಅರ್ಹ ಸಿಬ್ಬಂದಿಯನ್ನು ವಿಲೀನಗೊಳಿಸುವುದಕ್ಕೆ ಸಂಬಂಧಿಸಿದಂತೆ ಪರಿಶೀಲಿಸಲು ಈ ಕೆಳಕಂಡಂತೆ ಎರಡು ಪರಿಶೀಲನಾ ಸಮಿತಿಗಳನ್ನು ತಕ್ಷಣದಿಂದ ಜಾರಿಗೆ ಬರುವಂತೆ ರಚಿಸಿ ಆದೇಶಿಸಲಾಗಿದೆ.

**I** ಸರ್ಕಾರಿ ಸಂಸ್ಥೆಗಳಲ್ಲಿ ಕಾರ್ಯ ನಿರ್ವಹಿಸುತ್ತಿರುವ ಅರೆಕಾಲಿಕ (ಜೆ.ಓ.ಸಿ.) ಸಿಬ್ಬಂದಿಗಳ ಪರಿಶೀಲನಾ ಸಮಿತಿ

1. ನಿರ್ದೇಶಕರು, ಪದವಿ ಪೂರ್ವ ಶಿಕ್ಷಣ ಇಲಾಖೆ ... ಅಧ್ಯಕ್ಷರು
2. ಜಂಟಿ ನಿರ್ದೇಶಕರು, ಸಮಾಜ ಕಲ್ಯಾಣ ಇಲಾಖೆ ... ಸದಸ್ಯರು
3. ಜಂಟಿ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ ... ಸದಸ್ಯರು
4. ಉಪ ಕಾರ್ಯದರ್ಶಿ, ಶಿಕ್ಷಣ ಇಲಾಖೆ (ಆಡಳಿತ) ... ಸದಸ್ಯರು
5. ಸಿಬ್ಬಂದಿಯನ್ನು ವಿಲೀನಗೊಳಿಸಿಕೊಳ್ಳಲು ಇಚ್ಛಿಸಿರುವ ಆಯಾ ಇಲಾಖೆಯ ಮುಖ್ಯಸ್ಥರು ... ಸದಸ್ಯರು
6. ವೃತ್ತಿ ಶಿಕ್ಷಣ ಇಲಾಖೆಯ ನಿರ್ದೇಶಕರು ... ಸದಸ್ಯ ಕಾರ್ಯದರ್ಶಿ

**II** ಖಾಸಗಿ ಅನುದಾನಿತ ಸಂಸ್ಥೆಗಳಲ್ಲಿ ಕಾರ್ಯ ನಿರ್ವಹಿಸುತ್ತಿರುವ ಅರೆಕಾಲಿಕ (ಜೆ.ಓ.ಸಿ.) ಸಿಬ್ಬಂದಿಗಳ ಪರಿಶೀಲನಾ ಸಮಿತಿ.

1. ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ ... ಅಧ್ಯಕ್ಷರು
2. ಜಂಟಿ ನಿರ್ದೇಶಕರು, ಸಮಾಜ ಕಲ್ಯಾಣ ಇಲಾಖೆ ... ಸದಸ್ಯರು
3. ನಿರ್ದೇಶಕರು (ಪ್ರೌಢ ಶಿಕ್ಷಣ) ಸಾರ್ವಜನಿಕ ಶಿಕ್ಷಣ ಇಲಾಖೆ ... ಸದಸ್ಯರು
4. ಉಪ ಕಾರ್ಯದರ್ಶಿ, ಶಿಕ್ಷಣ ಇಲಾಖೆ (ಆಡಳಿತ) ... ಸದಸ್ಯರು
5. ಜೆ. ಓ. ಸಿ. ಸಿಬ್ಬಂದಿಯನ್ನು ವಿಲೀನಗೊಳಿಸಿಕೊಳ್ಳಲು ಇಚ್ಛಿಸಿರುವ ಆಯಾ ಇಲಾಖೆಯ ಮುಖ್ಯಸ್ಥರು ... ಸದಸ್ಯರು
6. ವೃತ್ತಿ ಶಿಕ್ಷಣ ಇಲಾಖೆಯ ನಿರ್ದೇಶಕರು ... ಸದಸ್ಯ ಕಾರ್ಯದರ್ಶಿ

**ಸಮಿತಿಯ ಕಾರ್ಯಸೂಚಿ :-**

**(1)** ಕರ್ನಾಟಕ ಅರೆಕಾಲಿಕ ವೃತ್ತಿ ಆಧಾರಿತ ಕೋರ್ಸುಗಳ ನೌಕರರನ್ನು ವಿಲೀನಗೊಳಿಸುವ ಅಧಿನಿಯಮ 2011 ರಲ್ಲಿ ನಿರ್ದಿಷ್ಟಪಡಿಸಿದ ಷರತ್ತುಗಳನ್ನು ಪೂರೈಸಿದಂತಹ ಮತ್ತು ವಿಲೀನಕ್ಕೆ ಅರ್ಹರಾಗಿರುವಂತಹ ಅರೆಕಾಲಿಕ ವೃತ್ತಿ ಆಧಾರಿತ ಕೋರ್ಸುಗಳ ನೌಕರರ ಹೆಸರುಗಳನ್ನು ಪರಿಶೀಲಿಸಿ ರಾಜ್ಯ ಸರ್ಕಾರಕ್ಕೆ ಶಿಫಾರಸ್ಸು ಮಾಡತಕ್ಕದ್ದು.

**(2)** ಅರ್ಹ ಅರೆಕಾಲಿಕ ವೃತ್ತಿ ಆಧಾರಿತ ಕೋರ್ಸುಗಳ ನೌಕರರ ಹೆಸರುಗಳನ್ನು ಸರ್ಕಾರಕ್ಕೆ ಶಿಫಾರಸ್ಸು ಮಾಡುವ ಪ್ರಕ್ರಿಯೆಯನ್ನು ಮೂರು ತಿಂಗಳ ಒಳಗಾಗಿ ಪೂರೈಸತಕ್ಕದ್ದು.

**(3)** ಸಮಿತಿಯು ತನ್ನ ಸ್ವಂತ ಕಾರ್ಯ ವಿಧಾನವನ್ನು ನಿರ್ಧರಿಸತಕ್ಕದ್ದು

**(4)** ಕರ್ನಾಟಕ ಅರೆಕಾಲಿಕ ವೃತ್ತಿ ಆಧಾರಿತ ಕೋರ್ಸುಗಳ ನೌಕರರನ್ನು ವಿಲೀನಗೊಳಿಸುವ ಅಧಿನಿಯಮ 2011ರ ಅನ್ವಯ ಸಿಬ್ಬಂದಿಗಳನ್ನು ವಿಲೀನಗೊಳಿಸುವ ಕುರಿತು ಅವಶ್ಯಕವಾದ ಎಲ್ಲ ಕ್ರಮಗಳನ್ನು ತೆಗೆದುಕೊಳ್ಳತಕ್ಕದ್ದು.

**(5)** ಸರ್ಕಾರವು ಕಾಲಕಾಲಕ್ಕೆ ಹೊರಡಿಸುವ ಆದೇಶಗಳನ್ವಯ ಕಾರ್ಯ ನಿರ್ವಹಿಸುವುದು ಮತ್ತು ಸರ್ಕಾರಕ್ಕೆ ಅವಶ್ಯಕವಿರುವ ಮಾಹಿತಿಯನ್ನು ಒದಗಿಸುವುದು.

**(6)** ಇತರೆ ಇಲಾಖೆಗಳಲ್ಲಿ ಖಾಲಿ ಇರುವ ಹುದ್ದೆಗಳ ವಿವರಗಳನ್ನು ತರಿಸಿಕೊಂಡು ಸರ್ಕಾರಕ್ಕೆ ಪ್ರಸ್ತಾಪಿಸತಕ್ಕದ್ದು

**(7)** ಆಯ್ಕೆ ಪ್ರಕ್ರಿಯೆಗಳಲ್ಲಿ ಮೀಸಲಾತಿ ನಿಯಮಗಳನ್ನು ಅಳವಡಿಸಿಕೊಳ್ಳತಕ್ಕದ್ದು

**(8)** ಅರೆಕಾಲಿಕ ಜೆ.ಓ.ಸಿ. ಬೋಧಕ/ಬೋಧಕೇತರ ಸಿಬ್ಬಂದಿ ಪಟ್ಟಿಯನ್ನು ವೃಂದವಾರು ಸಿದ್ಧಪಡಿಸಿ ಅಧಿಕೃತಗೊಳಿಸತಕ್ಕದ್ದು.

**(9)** ಅಭ್ಯರ್ಥಿಗಳ ಅರ್ಹತೆ, ಜ್ಯೇಷ್ಠತೆ, ಸ್ಯೂಟಬಿಲಿಟಿ ಬಗ್ಗೆ ಅವಶ್ಯಕ ದಾಖಲೆಗಳನ್ನು ಅಭ್ಯರ್ಥಿಗಳಿಂದ ಪಡೆದು ಪರಿಶೀಲಿಸಬಹುದು.

**(10)** ಈ ಪ್ರಕ್ರಿಯೆಯಲ್ಲಿ ಅಡೆತಡೆಗಳು ಉಂಟಾದಲ್ಲಿ ಸರ್ಕಾರದ ಮಾರ್ಗದರ್ಶನ ಪಡೆದುಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಸ್. ಬಿ. ಸಸಾಲಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಶಿಕ್ಷಣ ಇಲಾಖೆ

ಪಿ.ಆರ್. 1326

## ಶಿಕ್ಷಣ ಸಚಿವಾಲಯ

**ವಿಷಯ :** ರಾಜ್ಯದಲ್ಲಿನ ಹಿಂದಿ ವಿದ್ಯಾಲಯಗಳಿಗೆ ಅಲ್ಪಾವಧಿ ವೇತನವನ್ನು ಪರಿಷ್ಕರಿಸುವ ಬಗ್ಗೆ.

**ಓದಲಾಗಿದೆ :**
1. ದಿನಾಂಕ 29-05-2011 ರ ಸರ್ಕಾರದ ಆದೇಶ ಸಂಖ್ಯೆ: ಇಡಿ 300 ಪಿಟಿಐ 1994.
2. ದಿನಾಂಕ 13-07-2007, 19-07-2008, 06-01-2009 ಹಾಗೂ 11-01-2010ರ ಕರ್ನಾಟಕ ಸ್ವಚ್ಛಿಕ ಹಿಂದಿ ವಿದ್ಯಾಲಯಗಳ ಒಕ್ಕೂಟ, ಹುಬ್ಬಳ್ಳಿ ರವರ ಮನವಿಗಳು.
3. 30-07-2007, 09-01-2008, 01-10-2009, 09-02-2010, 23-04-2010 ಮತ್ತು 04-01-2011ರ ಉರ್ದು ಮತ್ತು ಇತರೆ ಅಲ್ಪ ಸಂಖ್ಯಾತ ಭಾಷಾ ಶಾಲೆಗಳ ನಿರ್ದೇಶಕರ ಪತ್ರಗಳ ಸಂಖ್ಯೆ: ಎಂ.ಸಿ. 10-ಹಿಂದಿ1/ಇತರೆ/2007-08.

**ಪ್ರಸ್ತಾವನೆ :**

1. ಮೇಲೆ (1) ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ರಾಜ್ಯದಲ್ಲಿರುವ ಸರ್ಕಾರೇತರ ಹಿಂದಿ ವಿದ್ಯಾಲಯಗಳಲ್ಲಿ ಕಾರ್ಯ ನಿರ್ವಹಿಸುತ್ತಿರುವ ಅಲ್ಪಾವಧಿ ಬೋಧಕ ಮತ್ತು ಬೋಧಕೇತರರಿಗೆ ಅಲ್ಪಾವಧಿ ವೇತನಾನುದಾನದ ದರಗಳನ್ನು ಮಂಜೂರು ಮಾಡಲಾಗಿತ್ತು ಸದರಿ ದರಗಳನ್ನು ಪರಿಷ್ಕರಿಸುವಂತೆ ಮೇಲೆ (2) ರಲ್ಲಿ ಓದಲಾದ ಅನೇಕ ಮನವಿಗಳಲ್ಲಿ ಕರ್ನಾಟಕ ಸ್ವಚ್ಛಿಕ ಹಿಂದಿ ವಿದ್ಯಾಲಯಗಳ ಒಕ್ಕೂಟ, ರವರು ಮನವಿ

ಮಾಡಿಕೊಂಡಿರುವುದನ್ನು ಪರಿಶೀಲಿಸಿ, ಉರ್ದು ಮತ್ತು ಭಾಷಾ ಅಲ್ಪ ಸಂಖ್ಯಾತ ನಿರ್ದೇಶಕರು ವಿವರವಾದ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿದ್ದರು. ಅವರ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಇಡಿ 383 ಪಿಟಿಐ 2011 ಬೆಂಗಳೂರು, ದಿನಾಂಕ : 10-05-2011**

2. ರಾಜ್ಯದಲ್ಲಿರುವ ಹಿಂದಿ ವಿದ್ಯಾಲಯಗಳಲ್ಲಿ ಕಾರ್ಯ ನಿರ್ವಹಿಸುತ್ತಿರುವ ಅಲ್ಪಾವಧಿ ಬೋಧಕ ಮತ್ತು ಬೋಧಕೇತರರಿಗೆ ಅನುದಾನ ಸಂಹಿತೆಯನ್ವಯ ಹಾಲಿ ಜಾರಿಯಲ್ಲಿರುವ ಅಲ್ಪಾವಧಿ ವೇತನಾನುದಾನದ ದರಗಳನ್ನು ಈ ಕೆಳಗೆ ನಮೂದಿಸಿದಂತೆ ಹೆಚ್ಚಿಸಿ ಪರಿಷ್ಕರಿಸಿ ಆದೇಶಿಸಲಾಗಿದೆ.

| ಕ್ರ. ಸಂ. | ತರಗತಿ | ದಿನಾಂಕ: 29-05-2001 ರ ಸರ್ಕಾರದ ಆದೇಶದ ಸಂಖ್ಯೆ: ಇಡಿ 300 ಪಿಟಿಐ 1994 ರನ್ವಯ ಜಾರಿಯಲ್ಲಿರುವ ಅಲ್ಪಾವಧಿ ಸಂಭಾವನೆ. | ಪರಿಷ್ಕೃತ ಅಲ್ಪಾವಧಿ ಸಂಭಾವನೆ ದರ |
|---|---|---|---|
| 1 | ಕಿರಿಯ ತರಗತಿ | ಪ್ರತಿ ತರಗತಿಗೆ ಒಂದು ಅಲ್ಪಾವಧಿ ಹಿಂದಿ ಶಿಕ್ಷಕರಿಗೆ ಮಾಹೆಯಾನ ನಿಶ್ಚಿತವಾಗಿ ರೂ. 300-00 ಅರೆಕಾಲಿಕ ಸಂಭಾವನೆ | ರೂ. 600-00 |
| 2 | ಹಿರಿಯ ತರಗತಿ | | |
| | ಅ. ಬೋಧಕ ಸಿಬ್ಬಂದಿ | ಪ್ರತಿ ತರಗತಿಗೆ ಒಂದು ಅಲ್ಪಾವಧಿ (ಅರೆಕಾಲಿಕ) ಹಿಂದಿ ಶಿಕ್ಷಕರಿಗೆ ಮಾಹೆಯಾನ ನಿಶ್ಚಿತವಾಗಿ ರೂ. 400-00 ರಂತೆ ಅರೆಕಾಲಿಕ ಸಂಭಾವನೆ | ರೂ. 800-00 |
| | ಆ. ಬೋಧಕೇತರ ಸಿಬ್ಬಂದಿ | ತರಗತಿಯ ಸಂಖ್ಯೆಯನ್ನು ಪರಿಗಣಿಸದೇ ಪ್ರತಿ ಶಾಖೆಗೆ ಮಾಹೆಯಾನ ನಿಶ್ಚಿತವಾಗಿ ರೂ. 150-00 ರಂತೆ ಸಂಭಾವನೆ ಒಂದು ಜವಾನ ಹುದ್ದೆಗೆ | ರೂ. 300-00 |

3. ಪರಿಷ್ಕೃತ ಅಲ್ಪಾವಧಿ ವೇತನ ದರಗಳು ಈ ಆದೇಶವನ್ನು ಹೊರಡಿಸಿದ ದಿನಾಂಕದಿಂದ ಜಾರಿಗೆ ಬರುತ್ತದೆ. ಈ ಹಿಂದೆ ನೀಡಿದಂತೆ ಸಂಭಾವನೆಯನ್ನು 10 ತಿಂಗಳ ಅವಧಿಗೆ ಮಾತ್ರ ನೀಡತಕ್ಕದ್ದು, ಸಾದಿಲ್ವಾರು ವೆಚ್ಚಕ್ಕಾಗಿ ಈ ಹಿಂದೆ ಅವಕಾಶ ಮಾಡಿರದೇ ಇರುವುದರಿಂದ ಅದನ್ನು ಪರಿಗಣಿಸತಕ್ಕದ್ದಲ್ಲ. ಈ ಪರಿಷ್ಕರಣೆಯಿಂದ ಉದ್ಭವಿಸುವ ಹೆಚ್ಚುವರಿ ವೆಚ್ಚವನ್ನು ಆಯವ್ಯಯದಲ್ಲಿ ಒದಗಿಸಲಾದ ಅನುದಾನದ ಮಿತಿಯಲ್ಲಿಯೇ ಭರಿಸತಕ್ಕದ್ದು.

4. ದಿನಾಂಕ 18-03-2011 ರ ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ ಆಇ 70 ವೆಚ್ಚ-8/2011 ರಲ್ಲಿ ಸಹಮತಿ ಪಡೆದು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಸ್.ಬಿ. ಸಸಾಲಟ್ಟಿ**
ಸರ್ಕಾರದ ಅಧೀನ ಕಾರ್ಯದರ್ಶಿಗಳು
ಶಿಕ್ಷಣ ಇಲಾಖೆ

ಪಿ.ಆರ್. 1327

## HORTICULTURE SECRETARIAT

**Sub:** "Scheme for Integrated Farming in Coconut for Productivity/ Improvement with Coconut Development Board Assistance (100% CDB) 2401-00-108-2-35 (Plan)" – State Level Administrative Approval for the year 2011-12-reg.

**Read :**
1. GO No. ತೋಇ 71 ತೋಯೋಕಾ 2011, dated : 31-03-2011.
2. Letter of CDBF No. 223/2011-Dev dated 18-04-2011.
3. Letter of Director of Horticulture No. DH/PC/AHO-2/3/2011-12/205 dated : 05-05-2011.

**PREAMBLE :**

The "Scheme for Integrated Farming in Coconut for Productivity/Improvement with Coconut Development Board Assistance (100% CDB)" Head of Account 2401-00--108-2-35-100 (Financial Assistance/ Relief) has been continued during 2011-12 as an ongoing scheme with an outlay of Rs. 700.00 lakhs as per Government Order read at (1) above. The scheme to be implemented as per the guidelines to be issued Coconut Development Board.

2. Coconut Development Board has conveyed approval for an amount of Rs. 550.360 lakhs for implementing CDB assisted programmes during 2011-12 vide its letter read at (2) above. The following has been the sharing pattern;

(Rs. In lakhs)

| Sl. No. | Agency | State Share | CDB share | Total |
|---|---|---|---|---|
| A | Programmes to be implemented by the State Department of Horticuture | 3.125 | 283.125 | 286.25 |
| B | Programmes to be implemented by the Coconut Development Board | - | 264.11 | 264.11 |
| | **Grand Total** | **3.125** | **547.235** | **550.36** |

3. The Director of Horticulture in his letter read at (3) above has requested the Government to accord State Level Administrative Approval for CDB assisted programmes during 2011-12 to the extent of Rs. 286.25 lakhs and has sought an additionality of Rs.245.00 lakhs.

4. The proposal of the Director of Horticulture has been examined and hence this order;

**GOVERNMENT ORDER NO. AHD 100 HPP 2011, BANGALORE, DATED : 13-05-2011**

Government is pleased to accord Administrative Approval for implementing the Coconut Development Programmes during the year 2011-12 with a total financial outlay of Rs. 550.36 lakhs. Component wise details are specified below:-

Coconut Development Board Schemes – 2011-12

(Rs. In Lakhs)

| Sl. No. | Name of the Scheme | Target | | | |
|---|---|---|---|---|---|
| | | | Fin | | |
| | | Phy. | State Share | CDB share | Total |
| A | <u>PROGRAMMES TO BE IMPLEMENTED BY THE STATE DEPARTMENT OF HORTICULTURE</u><br>1) Production and Distribution of Planting Materials – Production and Distribution of TXD hybrids and other released varieties (50:50 basis) | 25.000 Nos | 3.125 | 3.125 | 6.25 |
| | 2) Integrated farming in Coconut holdings for Productivity Improvement –Laying out demonstration plots | 200 ha (New) | - | 35.00 | 35.00 |
| | | 1400 ha (Maintenance for 2010-11) | - | 245.00 | 245.00 |
| | **Total** | | **3.125** | **283.125** | **286.25** |
| B | <u>PROGRAMMES TO BE IMPLEMENTED BY THE COCONUT DEVELOPMENT BOARD</u><br>1. Production and Distribution of Planting Materials – Aid to Private nurseries and seed gardens | | | | |
| | a) Seed garden (Big unit) | | | - | On need basis |
| | b) Nursery (Small unit) | | | - | On need basis |
| | 2) Expansion of area under coconut | 150 ha | - | 16.110 | 16.110 |
| | 3) Integrated Farming in Coconut Holding for Productivity Improvement – | | | | |
| | c) Laying out of Demonstration plots | 400 ha | - | 245.00 | 245.00 |
| | d) Organic Manure Unit | 15 units | - | 3.00 | 3.00 |
| | **Total** | | **-** | **264.11** | **264.11** |
| | **Grand Total** | | **3.125** | **547.235** | **550.36** |

2. The Expenditure towards the programmes to be implemented by the State Department of Horticulture will be met under the "Scheme for Integrated Farming in Coconut for Productivity / Improvement with Coconut Development Board Assistance (100% CDB)" Head of Account 2401-00-108-2-35-100 (Plan) (Financial Assistance) to the tune of Rs. 286.25 lakhs.

3. The Director of Horticulture shall submit Utilization Certificate in respect of continuing scheme implemented during 2010-11. Any unspent balance as on 01-04-2011 under each scheme sanctioned during the financial year 2010-11 including interest accrued may be furnished to Coconut Development Board and obtained revalidation/adjustments against funds released.

4. Allocation of 30%, 16% and 8% may be made to women, scheduled caste and scheduled tribe, respectively while implementing the scheme. Monthly and quarterly reports of the schemes may be reported to Coconut Development Board on or before 10th of succeeding month.

5. In order to ensure the successful implementation of the scheme State Level Monitoring Committee has been constituted as below:

| | | |
|---|---|---|
| 1 | Principal Secretary, Horticulture, Government of Karnataka | Chairman |
| 2 | Director of Horticulture, Government of Karnataka | Member |
| 3 | Director, Central Planting Crop Research Institute, Kasaragodu | Member |
| 4 | Vice-Chancellor, University of Horticultural Sciences, Bagalkote | Member |
| 5 | Board Member (s), Coconut Development Board representing the State of Karnataka | Member |
| 6 | Director, Coconut Development Board, Regional Office, Bangalore | Convener |

6. The Director of Horticulture shall ensure the following:

a) In the case of production of TXD hybrid seedlings the details of male and female parent sources should be clearly indicated. The receipts accrued from the sale of seedlings under the TXD schemes may also be intimated to Coconut Development Board without fail. These receipts are to be shared by the Board and the State Government on 50:50 basis.

b) Under the Area Expansion Programme, the source of planting materials shall be from the Nurseries of State Govt./CDB/CPCRI/CDB assisted Private Nurseries/SAUs.

c) The basic yield data prior to the adoption of improved packages should be recorded from the plots identified for demonstration purpose.

d) The schemes 'Laying out demonstration plots' & 'Establishment of organic manure units' will be implemented as per the approved pattern. Under the scheme 'Laying out demonstration plots' financial assistance is limited to Rs. 35,000/- per hectare depending on the activities under taken in the gardens in two annual installments. Necessary instructions shall be issued to the District Level Implementing Officers to initiate action to implement the Integrated Farming Scheme on a cluster basis. While selecting the cluster, preference should be given for areas with high incidence of pests and diseases. Modalities/Criteria to be followed for implementation of the integrated farming scheme on cluster basis are as below:-

* A compact area approach with an extent of 25 ha. shall be selected by implementation of integrated farming scheme. All the small and marginal farmers coming under the cluster should be considered as beneficiaries of the programme based on the suitability of their coconut gardens irrespective of size of land holding.
* Conduct base line survey to record the present status of the crop and status of farmers before implementation of the projects. Data should be analyzed, and properly documented.
* Preference should be given to groups, which are promoted or supported by NGO/Community based organizations/Co-op societies etc.
* Cluster should have a technical resource group for monitoring and implementation of the different components of the programme. This resource group should visit different areas in the cluster in fixed days in a month. The resource groups should consist of the field level functionaries of the Horticulture Department, the Agricultural University, Coconut Development Board officials and scientists from Research Stations.
* A farmer leader should be identified for each group in the project area and the leader should be trained on all technologies to be adopted in the project area.
* The possibility of promoting farm level processing in the project area is to be ascertained and economically desirable coconut products are to be promoted through the groups.
* The technical programme and the calendar of operations for the year 2010-11 shall be prepared and distributed to the beneficiaries immediately for making arrangements for supply of inputs and timely adoption of the management practices.
* Supply of quality coconut seedlings is to be ensured in the selected clusters for new planting/under planting. Their groups shall be promoted for production of quality seedlings by procuring seed nuts from the disease tolerant mother palm available in the project area. The mother palms selected in the root wilt affected areas shall be subjected to serological test at CPCRI as far as possible.

e) Under the scheme Organic Manure Unit, financial assistance is extended to popularize the use of Organic Manure in coconut holdings. Financial assistance is extended at the rate of Rs. 20,000/- limited to 50% of the fixed and maintenance cost (size=15m X 1.5m X 0.70m). However, smaller units may be promoted and financial assistance may be reduced accordingly.

7. Releases will be made as and when Coconut Development Board provides funds.

8. The Director of Horticulture shall give wide publicity to the technology mission on coconut and identify, formulate and forward suitable projects to be proposed to Coconut Development Board as per the guidelines under the Technology Mission on Coconut.

9. The Director of Horticulture is requested to submit a detailed proposal for additionality during 2011-12 with justification of proposing to Coconut Development Board and Finance Department.

10. This order issues with the concurrence of Internal Financial Advisor, Agriculture and Horticulture Department vide Note No. ಕೃತೋಇ 11 ಆಂಆಸ 2011 dated 11-05-2011.

By Order and in the name of the Governor of Karnataka

**B.C. Prakash**

Under Secretary to Government,

Horticulture Department.

P.R. 1328

## HORTICULTURE SECRETARIAT

**Sub:** "Scheme for Integrated Farming in Coconut for Productivity/ Improvement with Coconut Development Board Assistance (100% CDB)" Release of Coconut Development Board shares for Establishment of Neera demonstration unit at Horticulture Farm, Tumbe, Dakshina Kannada district during 2011-12 – reg.

**Read :**
1. G.O. No. ತೋಇ 74 ತೋಯೋಕಾ 2010, dated : 12-05-2010
2. G.O. No. HCD 51 HPP 2010, dated 28-03-2011
3. Coconut Development Board letter No: 65/2010 Tech (144) dated 29-03-2011
4. Letter of Director of Horticulture No. ತೋಇ/ತೋಬೆ/ಸತೋಅ2/01/ 2010-11 dated : 26-04-2011.

**PREAMBLE :**

Sanction had been accorded to the Director of Horticulture to implement a new component during 2010-11 namely, "Establishment of Neera demonstration unit at Horticulture Farm, Tumbe, Dakshina Kannada district" under the "Scheme for Integrated Farming in Coconut for Productivity/Improvement in the State" under the Head of Account 2401-00-108-2-35-100 (Financial Assistance/Relief), as per Government Order read at (1) above. The total cost of the project will be Rs. 77.35 lakhs out of which Rs. 15.04 lakhs has been Coconut Development Board share and Rs. 62.31 lakhs has been the State share.

2. An amount of Rs. 62.00 lakhs has been released to the Director of Horticulture towards the state share for the above programme vide Government Order read at (2) above.

3. Coconut Development Board has released an amount of Rs. 7.5 lakhs towards the first installment of its financial assistance for the programme as per Coconut Development Board letter read at (3) above.

4. The Director of Horticulture vide his letter read at (4) above has informed that the said amount of Rs. 7.5 lakhs has been remitted to the treasury and has requested the Government to release an amount Rs. 7.5 lakhs towards the Coconut Development board share for the project.

5. This has been examined and hence this Order:

**GOVERNMENT ORDER NO. HCD 108 HPP 2011, BANGALORE, DATED : 12-05-2011**

Government is pleased to release an amount of Rs. 7.50 lakhs (Rupees Seven lakhs and fifty thousand only) to the Director of Horticulture under the "Scheme for Integrated Farming in Coconut for Productivity/Improvement in the State" under the Head of Account 2401-00-108-2-35-100 (Financial Assistance) during the year 2011-12 as its share of Coconut Development Board for the purpose of "Establishment of Neera demonstration unit at Horticulture Farm, Tumbe, Dakshina Kannada district".

2. This order is issued with the concurrence of Internal Financial Advisor to Agriculture and Horticulture Dept. vide Note. No. ಕೃತೋಇ 10 ಆಂಆಸ 2011, dated : 09-05-2011.

By Order and in the name of the Governor of Karnataka

**B.C. Prakash**

Under Secretary to Government,

Horticulture Department.

P.R. 1329

## ಸಮಾಜ ಕಲ್ಯಾಣ ಸಚಿವಾಲಯ

**ವಿಷಯ :** ಶ್ರೀ ಎಸ್.ಆರ್. ಪಟಾಲಪ್ಪ, ಯೋಜನಾ ಸಮನ್ವಯ ಅಧಿಕಾರಿ, ಸಮಗ್ರ ಗಿರಿಜನ ಅಭಿವೃದ್ಧಿ ಯೋಜನೆ, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಇವರ ವಿರುದ್ಧ ಶಿಸ್ತು ಕ್ರಮ ಜರುಗಿಸುವ ಬಗ್ಗೆ.

**ಓದಲಾಗಿದೆ :**
1) ಸರ್ಕಾರದ ಸುತ್ತೋಲೆ ಸಂಖ್ಯೆ: ಸಿಆಸುಇ 34 ಸೇನೆನಿ 2010, ದಿನಾಂಕ 28–05–2010.
2) ಸರ್ಕಾರದ ಅನಧಿಕೃತ ಟಿಪ್ಪಣಿ ಸಂಖ್ಯೆ: ಸಿಆಸುಇ 34 ಸೇನೆನಿ 2010, ದಿನಾಂಕ 11–06–2010.
3) ಸರ್ಕಾರದ ಪತ್ರ ಸಂಖ್ಯೆ: ಸಕಇ 26 ಎಸ್‌ಟಿಸಿ 2010, ದಿನಾಂಕ 07–07–2010.

ಪ್ರಸ್ತಾವನೆ :

ನಿರ್ದೇಶಕರು, ಪರಿಶಿಷ್ಠ ಪಂಗಡಗಳ ಕಲ್ಯಾಣ ಇಲಾಖೆ, ಇವರು ಉಪನಿರ್ದೇಶಕರು (ಆಡಳಿತ ಮತ್ತು ಶಿಕ್ಷಣ) ಹಾಗೂ ಲೆಕ್ಕಾಧಿಕಾರಿ ಇವರೊಂದಿಗೆ ಮಂಗಳೂರಿಗೆ ದಿನಾಂಕ 28–04–2011 ರಂದು ಯೋಜನಾ ಸಮನ್ವಯಾಧಿಕಾರಿ, ಸಮಗ್ರ ಗಿರಿಜನ ಅಭಿವೃದ್ಧಿ ಯೋಜನೆ, ದಕ್ಷಿಣ ಕನ್ನಡ, ಮಂಗಳೂರು ಇವರ ಕಚೇರಿಗೆ ಭೇಟಿ ಕೊಟ್ಟು ಸಂಬಂಧಪಟ್ಟ ಕಡತ/ದಾಖಲಾತಿಗಳನ್ನು ಪರಿಶೀಲಿಸಲಾಗಿ ಈ ಕೆಳಕಂಡ ಅಂಶಗಳು ತಿಳಿದು ಬಂದಿರುತ್ತದೆ.

1. ಶ್ರೀ ಎಸ್.ಆರ್. ಪಟಾಲಪ್ಪ (ಮೂಲತ: ಕೃಷಿ ಇಲಾಖೆ ಅಧಿಕಾರಿ) ರವರು ನಿಯೋಜನೆ ಮೇರೆಗೆ ದಿನಾಂಕ 29–11–2010 ರಿಂದ ಯೋಜನಾ ಸಮನ್ವಯಾಧಿಕಾರಿ, ಸಮಗ್ರ ಗಿರಿಜನ ಅಭಿವೃದ್ಧಿ ಯೋಜನೆ. ದಕ್ಷಿಣ ಕನ್ನಡ, ಮಂಗಳೂರು ಈ ಹುದ್ದೆಯಲ್ಲಿ ನಿಯೋಜನೆ ಮೇಲೆ ಕಾರ್ಯ ನಿರ್ವಹಿಸುತ್ತಿದ್ದು. ಇಲಾಖೆಯಲ್ಲಿ ಪರಿಶಿಷ್ಟ ವರ್ಗಗಳ ಕಲ್ಯಾಣಕ್ಕಾಗಿ ಬಿಡುಗಡೆಯಾಗುತ್ತಿದ್ದ ಅನುದಾನವನ್ನು ಹಿಂದಿನಿಂದಲೂ ಮಂಗಳೂರು ನಗರದ ಕಾವೂರಿನಲ್ಲಿರುವ ಕಾರ್ಪೋರೇಷನ್ ಬ್ಯಾಂಕ್‌ನ ಉಳಿತಾಯ ಖಾತೆ ಹಾಗೂ ವಿಜಯಾ ಬ್ಯಾಂಕ್, ಅಶೋಕ ನಗರ ಶಾಖೆ, ಮಂಗಳೂರು ಇಲ್ಲಿ ಜಮಾ ಮಾಡಿ ನಿರ್ವಹಿಸಲಾಗುತ್ತಿತ್ತು.

2. ಶ್ರೀ ಎಸ್.ಆರ್. ಪಟಾಲಪ್ಪ, ಯೋಜನಾ ಸಮನ್ವಯಾಧಿಕಾರಿ, ಸಮಗ್ರ ಗಿರಿಜನ ಅಭಿವೃದ್ಧಿ ಯೋಜನೆ, ದಕ್ಷಿಣ ಕನ್ನಡ ಇವರು ಸ್ಟೇಟ್ ಬ್ಯಾಂಕ್ ಆಫ್ ಮೈಸೂರು, ಕೊಟ್ಟಾರ ಚೌಕಿ ಬ್ರಾಂಚ್ ಇಲ್ಲಿ ಹೊಸದಾಗಿ ಉಳಿತಾಯ ಖಾತೆ ತೆರೆಯುವ ಸಲುವಾಗಿ ಅವರ ಕೈ ಬರಹದಲ್ಲಿ ವ್ಯವಸ್ಥಾಪಕರು, ಸ್ಟೇಟ್ ಬ್ಯಾಂಕ್ ಆಫ್ ಮೈಸೂರು ಇವರಿಗೆ ದಿನಾಂಕ 06-01-2011 ರಂದು ಪತ್ರ ಬರೆದಿದ್ದು, ದಿನಾಂಕ 06-01-2011 ರಂದು ಖಾತೆ ತೆರೆಯಲಾಗಿದೆ. ಇದಕ್ಕೆ ಇಲಾಖೆಯ ನಿರ್ದೇಶಕರು ಅಥವಾ ಮುಖ್ಯ ಕಾರ್ಯನಿರ್ವಹಣಾಧಿಕಾರಿ, ಜಿಲ್ಲಾ ಪಂಚಾಯತ್, ದಕ್ಷಿಣ ಕನ್ನಡ ಜಿಲ್ಲೆ ಇವರ ಅನುಮತಿ ಪಡೆದಿರುವುದಿಲ್ಲ. ಈ ಪತ್ರ ವ್ಯವಹಾರ ಕುರಿತಂತೆ ಯಾವುದೇ ಕಡತದ ಸಂಖ್ಯೆಯಾಗಲಿ, ಪತ್ರದ ಸಂಖ್ಯೆಯಾಗಲಿ, ವಿಷಯ ನಿರ್ವಾಹಕರ ಸಹಿಯಾಗಲಿ ಹಾಗೂ ಕಚೇರಿ ಅಧೀಕ್ಷಕರ ಸಹಿಯಾಗಲಿ ಇರುವುದಿಲ್ಲ, ಅದಲ್ಲದೆ ಅವಶ್ಯಕವಾಗಿ ಪತ್ರಕ್ಕೆ ಬೇಕಾಗಿರುವ ಕಚೇರಿ ಸೀಲು ಇರುವುದಿಲ್ಲ. ಇದಕ್ಕೆ ಸಂಬಂಧಪಟ್ಟ ಚೆಕ್ ಬುಕ್ ಮತ್ತು ಪಾಸ್ ಬುಕ್‌ಗಳನ್ನು ಕಚೇರಿ ಸಿಬ್ಬಂದಿಗೆ ನೀಡದೇ ಶ್ರೀ ಎಸ್.ಆರ್. ಪಟಾಲಪ್ಪನವರೇ ಇಟ್ಟುಕೊಂಡಿದ್ದರು.

3. 2009-10ನೇ ಸಾಲಿನಲ್ಲಿ ವೇತನದ ಕೊರತೆಯನ್ನು ಭರಿಸಲು ನಿರ್ದೇಶಕರು. ಪರಿಶಿಷ್ಟ ವರ್ಗಗಳ ಕಲ್ಯಾಣ ಇಲಾಖೆ ಇವರ ಕಚೇರಿಯಿಂದ ರೂ. 6.00 ಲಕ್ಷ ಬಿಡುಗಡೆಯಾಗಿದ್ದು. ಸದರಿ ಅನುದಾನವನ್ನು ವಿಜಯಾ ಬ್ಯಾಂಕ್‌ನಲ್ಲಿ ಜಮಾ ಮಾಡಿದ್ದು. ಈ ಮೊತ್ತದಲ್ಲಿ ರೂ. 2,03,187.00 ಉಳಿಕೆಯಾಗಿತ್ತು. ಸದರಿ ಅನುದಾನದಲ್ಲಿ ಕಚೇರಿ ಸಿಬ್ಬಂದಿಗೆ 01/2011 ರಿಂದ 3/2011 ರವರೆಗೆ ತುಟ್ಟಿಭತ್ಯೆ ಪಾವತಿಗಾಗಿ ಚೆಕ್ ಬರೆಯುವ ಸಂದರ್ಭದಲ್ಲಿ ಚೆಕ್ ಪುಸ್ತಕದಲ್ಲಿ ಎರಡು ಚೆಕ್ ಹಾಳೆಗಳು ಅವುಗಳ ಚೆಕ್ ಸಂಖ್ಯೆ: 174233 ಹಾಗೂ 174236 ಆಗಿದ್ದು. ಕಳುವಾಗಿರುತ್ತದೆಂದು ದಿನಾಂಕ: 19-04-2011 ರಂದು ಸಂಬಂಧಪಟ್ಟ ವಿಷಯ ನಿರ್ವಾಹಕರು ಕಚೇರಿಯ ಅಧೀಕ್ಷಕರ ಗಮನಕ್ಕೆ ತಂದಿರುತ್ತಾರೆ. ಕಚೇರಿ ಅಧೀಕ್ಷಕರು ಕಳುವಾಗಿರುವ ಚೆಕ್‌ಗಳನ್ನು ನಗದೀಕರಿಸದಂತೆ ಮ್ಯಾನೇಜರ್ ವಿಜಯಾ ಬ್ಯಾಂಕ್ ಇವರಿಗೆ ದಿನಾಂಕ: 19-04-2011 ರಂದು ಪತ್ರ ಬರೆದು ಯೋಜನಾ ಸಮನ್ವಯಾಧಿಕಾರಿ ಇವರ ಗಮನಕ್ಕೆ ತರಲಾಗಿ ಆ ಎರಡು ಚೆಕ್‌ಗಳನ್ನು ತಾವೇ ತೆಗೆದುಕೊಂಡಿದ್ದಾಗಿ ತಿಳಿಸಿರುತ್ತಾರೆ.

4. ಆದಾಗ್ಯೂ ಕಚೇರಿಯ ಸಿಬ್ಬಂದಿ ವಿಜಯಾ ಬ್ಯಾಂಕ್‌ಗೆ ಹೋಗಿ ವಿಚಾರಿಸಿದಾಗ ಆ ಚೆಕ್‌ಗಳ ಪೈಕಿ ಒಂದು ಚೆಕ್‌ನಲ್ಲಿ ರೂ. 5.00.000.00 ಮೊತ್ತವನ್ನು ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿ, ಬಂಟ್ವಾಳ ಇವರಿಗೆ ನೀಡಿ. ಇನ್ನೊಂದು ಚೆಕ್ ಮೂಲಕ ಶ್ರೀ ಎಸ್.ಆರ್. ಪಟಾಲಪ್ಪ ಇವರು ರೂ. 2,65,000.00 ಡ್ರಾ ಮಾಡಿದ್ದಾರೆ ಆದರೆ ಯಾವ ಉದ್ದೇಶಕ್ಕಾಗಿ ಉಲ್ಲೇಖಿತ ಮೊತ್ತ ಡ್ರಾ ಮಾಡಿದ್ದಾರೆ ? ಎಂಬುದರ ಮಾಹಿತಿ ಇರುವುದಿಲ್ಲ.

5. ಅದಲ್ಲದೆ ಸ್ಟೇಟ್ ಬ್ಯಾಂಕ್‌ನಲ್ಲಿ ಹೊಸದಾಗಿ ತೆರೆಯಲಾದ ಖಾತೆಗೆ ದಿನಾಂಕ: 10-01-2011 ರಿಂದ 21-04-2011 ರವರೆಗಿನ ಅವಧಿಯಲ್ಲಿ ಒಟ್ಟು 11 ಡಿ.ಡಿ./ಚೆಕ್‌ಗಳ ಒಟ್ಟು ಮೊತ್ತ ರೂ. 90,04,693.00 ಜಮೆಯಾಗಿದ್ದು. 19 ಚೆಕ್‌ಗಳನ್ನು ಉಪಯೋಗಿಸಿ ದಿನಾಂಕ 11-01-2011 ರಿಂದ ದಿನಾಂಕ: 26-04-2011 ವರೆಗಿನ ಅವಧಿಯಲ್ಲಿ ಒಟ್ಟು ರೂ. 79,02,211.00 ರಷ್ಟು ಮೊತ್ತವನ್ನು ಚೆಕ್ ಮೂಲಕ ಯಾವುದೇ ಸಂಬಂಧವಿಲ್ಲದ ವಿವಿಧ ವ್ಯಕ್ತಿಗಳಿಗೆ ಹಾಗೂ ಖಾಸಗಿ ಸಂಸ್ಥೆಗಳಿಗೆ ಪಾವತಿಸಿದ್ದು, ಯಾವ ಉದ್ದೇಶಕ್ಕಾಗಿ ನೀಡಿದ್ದಾರೆ ಎಂಬ ಬಗ್ಗೆ ಯಾವುದೇ ವಿವರ ಲಭ್ಯವಿರುವುದಿಲ್ಲ ಎಂಬುದಾಗಿ ಜಿಲ್ಲಾ ಪಂಚಾಯತ್‌ನ ಲೆಕ್ಕಪರಿಶೋಧನಾ ತಂಡವು ವರದಿಯಲ್ಲಿ ನಮೂದಿಸಿರುತ್ತದೆ.

6. ದಿನಾಂಕ: 29-04-2011 ರಂದು ಸ್ಥಳೀಯ ಉರ್ವ ಪೊಲೀಸ್ ಠಾಣೆಯಲ್ಲಿ ಶ್ರೀ ಎಸ್.ಆರ್. ಪಟಾಲಪ್ಪ ಇವರ ವಿರುದ್ಧ ಕ್ರಿಮಿನಲ್ ಮೊಕದ್ದಮೆ ದಾಖಲಿಸಲು ಮುಖ್ಯ ಕಾರ್ಯನಿರ್ವಹಣಾಧಿಕಾರಿ, ಜಿಲ್ಲಾ ಪಂಚಾಯತ್, ದಕ್ಷಿಣ ಕನ್ನಡ ಇವರು ದೂರು ನೀಡಿದ್ದು, ಆ ಮೇರೆಗೆ ಉರ್ವ ಠಾಣೆಯಲ್ಲಿ ಮೊಕದ್ದಮೆ ನಂ: 34/2011 ಕಲಂ 417, 420 ಹಾಗೂ 409 ಭಾರತ ದಂಡ ಸಂಹಿತೆ ಪ್ರಕಾರ ಪ್ರಕರಣ ದಾಖಲಾಗಿದ್ದು, ನ್ಯಾಯಾಲಯಕ್ಕೆ ಪ್ರಥಮ ವರ್ತಮಾನ ವರದಿ ಸಲ್ಲಿಸಿರುತ್ತಾರೆ. ಸದರಿ ಪ್ರಕರಣ ತನಿಖೆಯಲ್ಲಿರುತ್ತದೆ.

7. ಶ್ರೀ ಎಸ್.ಆರ್. ಪಟಾಲಪ್ಪ, ಯೋಜನಾ ಸಮನ್ವಯಾಧಿಕಾರಿ, ಸಮಗ್ರ ಗಿರಿಜನ ಅಭಿವೃದ್ಧಿ ಯೋಜನೆ, ದಕ್ಷಿಣ ಕನ್ನಡ ಇವರು ದಿನಾಂಕ: 27-04-2011 ರಿಂದ ಕರ್ತವ್ಯಕ್ಕೆ ಅನಧಿಕೃತ ಗೈರುಹಾಜರಾಗಿದ್ದು, ದೂರವಾಣಿ ಮತ್ತು ಮೊಬೈಲ್ ಪೋನ್‌ಗಳನ್ನು ಸ್ಥಗಿತಗೊಳಿಸಿ ಯಾರ ಸಂಪರ್ಕಕ್ಕೂ ಸಿಗದೇ ತಲೆ ಮರೆಸಿಕೊಂಡಿರುತ್ತಾರೆ.

8. ಶ್ರೀ ಎಸ್.ಆರ್. ಪಟಾಲಪ್ಪ, ಇವರು ಒಟ್ಟು ರೂ. 86,66,000.00 ರಷ್ಟು ಮೊತ್ತದ ಸರ್ಕಾರದ ಹಣವನ್ನು ದುರುಪಯೋಗಪಡಿಸಿಕೊಂಡಿರುವ ಅಂಶವು ಸಂಬಂಧಪಟ್ಟ ದಾಖಲೆಗಳಿಂದ ಮೇಲ್ನೋಟಕ್ಕೆ ಕಂಡು ಬಂದಿರುವ ಹಿನ್ನಲೆಯಲ್ಲಿ ಅವರ ವಿರುದ್ಧ ಶಿಸ್ತುಕ್ರಮ ಜರುಗಿಸುವಂತೆ ನಿರ್ದೇಶಕರು, ಪರಿಶಿಷ್ಟ ವರ್ಗಗಳ ಕಲ್ಯಾಣ ಇಲಾಖೆ ಇವರು ಪ್ರಸ್ತಾವನೆ ಸಲ್ಲಿಸಿರುತ್ತಾರೆ.

9. ಶ್ರೀ ಎಸ್.ಆರ್. ಪಟಾಲಪ್ಪ, ಇವರನ್ನು ಸೇವೆಯಿಂದ ಅಮಾನತ್ತುಗೊಳಿಸದಿದ್ದಲ್ಲಿ ಸದರಿ ಪ್ರಕರಣಕ್ಕೆ ಸಂಬಂಧಿಸಿದ ದಾಖಲಾತಿ:ಪುರಾವೆಗಳನ್ನು ನಾಶಪಡಿಸುವ ಸಂಭವವಿರುತ್ತದೆ.

ಆ ಮೇರೆಗೆ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಕಇ 92 ಪವಯೋ 2011 ಬೆಂಗಳೂರು, ದಿನಾಂಕ : 07-05-2011**

ಯೋಜನಾ ಸಮನ್ವಯಾಧಿಕಾರಿ ಸಮಗ್ರ ಗಿರಿಜನ ಅಭಿವೃದ್ಧಿ ಯೋಜನೆ, ದಕ್ಷಿಣ ಕನ್ನಡ ಮಂಗಳೂರು ಈ ಹುದ್ದೆಯಲ್ಲಿ ನಿಯೋಜನೆ ಮೇಲೆ ಕಾರ್ಯನಿರ್ವಹಿಸುತ್ತಿರುವ ಶ್ರೀ ಎಸ್.ಆರ್. ಪಟಾಲಪ್ಪ ಇವರ ವಿರುದ್ಧ ಶಿಸ್ತುಕ್ರಮ ಬಾಕಿ ಇರಿಸಿ ಈ ಕೂಡಲೇ ಜಾರಿಗೆ ಬರುವಂತೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ (1958) ನಿಯಮ 10(1)(ಡಿ) ಸಹವಾಚ 10(3)ರ ಅಡಿ ಪ್ರದತ್ತವಾದ ಅಧಿಕಾರ ಚಲಾಯಿಸಿ ಸೇವೆಯಿಂದ ಅಮಾನತ್ತುಗೊಳಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಸ್. ಲೋಕನಾಥರಾವ್**

ಸರ್ಕಾರದ ಅಧೀನ ಕಾರ್ಯದರ್ಶಿ-2,

ಸಮಾಜ ಕಲ್ಯಾಣ ಇಲಾಖೆ

ಪಿ.ಆರ್. 1330

## ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವಾಲಯ

**ವಿಷಯ :** ಮಲೆನಾಡು ಪ್ರದೇಶಾಭಿವೃದ್ಧಿ ಮಂಡಳಿಗೆ 2011-12ನೇ ಸಾಲಿನಲ್ಲಿ ಮೊದಲನೇ ಕಂತಾಗಿ ರೂ.850.00 ಲಕ್ಷಗಳನ್ನು ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :** ಕಾರ್ಯದರ್ಶಿ, ಮಲೆನಾಡು ಪ್ರದೇಶಾಭಿವೃದ್ಧಿ ಮಂಡಳಿ, ಇವರ ಪತ್ರ ಸಂಖ್ಯೆ: ಮಪ್ರಮಂ:ನಗದು:ಹ:ಬಿ:2011-12, ದಿನಾಂಕ: 25/04/2011.

**ಪ್ರಸ್ತಾವನೆ :**

2011-12ನೇ ಸಾಲಿನಲ್ಲಿ ಮಲೆನಾಡು ಪ್ರದೇಶಾಭಿವೃದ್ಧಿ ಮಂಡಳಿಗೆ ಲೆಕ್ಕಶೀರ್ಷಿಕೆ "2515-00-800-0-05-(ಯೋಜನೆ)" ಅಡಿಯಲ್ಲಿ ರೂ. 100.00ಲಕ್ಷಗಳನ್ನು ಹಾಗೂ "4515-00-800-0-03" ಅಡಿಯಲ್ಲಿ ರೂ. 3300.00ಲಕ್ಷಗಳನ್ನು ಒದಗಿಸಲಾಗಿದೆ. ಮೇಲೆ ಓದಲಾದ(1)ರ ಪತ್ರದಲ್ಲಿ ಕಾರ್ಯದರ್ಶಿ, ಮಲೆನಾಡು ಪ್ರದೇಶಾಭಿವೃದ್ಧಿ ಮಂಡಳಿ, ಇವರು ಮೊದಲನೆಯ ಕಂತನ್ನು ಬಿಡುಗಡೆ ಮಾಡಲು ಕೋರಿರುವ ಹಿನ್ನಲೆಯಲ್ಲಿ ಮಂಡಳಿಗೆ ಮೊದಲನೆಯ ಕಂತಾಗಿ ರೂ.850.00ಲಕ್ಷಗಳನ್ನು ಬಿಡುಗಡೆ ಮಾಡಲು ಉದ್ದೇಶಿಸಲಾಗಿದೆ. ಆದುದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಯೋಇ 15 ಮಪ್ರಮಂ 2011 ಬೆಂಗಳೂರು, ದಿನಾಂಕ: 18/05/2011.**

2011-12ನೇ ಸಾಲಿನಲ್ಲಿ ಮಲೆನಾಡು ಪ್ರದೇಶಾಭಿವೃದ್ಧಿ ಮಂಡಳಿಗೆ ಆಡಳಿತ ವೆಚ್ಚಗಳಿಗಾಗಿ ಲೆಕ್ಕಶೀರ್ಷಿಕೆ "2515-00-800-0-05-101(ಸಹಾಯಾನುದಾನ) ಅಡಿಯಲ್ಲಿ ರೂ. 25.00 ಲಕ್ಷಗಳನ್ನು (ಇಪ್ಪತ್ತೈದು ಲಕ್ಷಗಳು ಮಾತ್ರ) ಬಂಡವಾಳ ವೆಚ್ಚಗಳಿಗಾಗಿ ಲೆಕ್ಕಶೀರ್ಷಿಕೆ "4515-00-800-0-03-132" ಅಡಿಯಲ್ಲಿ ರೂ. 575.00ಲಕ್ಷಗಳನ್ನು (ಐನ್ನೂರ ಎಪ್ಪತ್ತೈದು ಲಕ್ಷ ರೂಪಾಯಿಗಳು ಮಾತ್ರ) ವಿಶೇಷ ಘಟಕ ಯೋಜನೆಯಡಿ "4515-00-800-0-03-422" ಅಡಿಯಲ್ಲಿ ರೂ. 175.00ಲಕ್ಷಗಳನ್ನು (ನೂರು ಎಪ್ಪತ್ತೈದು ಲಕ್ಷಗಳು ಮಾತ್ರ) ಹಾಗೂ ಗಿರಿಜನ ಉಪಯೋಜನೆಯಡಿ ಕಾಮಗಾರಿಗಳನ್ನು ಅನುಷ್ಠಾನಗೊಳಿಸಲು ಲೆಕ್ಕಶೀರ್ಷಿಕೆ "4515-00-800-0-03-423" ಅಡಿಯಲ್ಲಿ ರೂ. 75.00 ಲಕ್ಷಗಳನ್ನು (ಎಪ್ಪತ್ತೈದು ಲಕ್ಷಗಳು ಮಾತ್ರ) ಒಟ್ಟು ರೂ. 850.00 ಲಕ್ಷಗಳನ್ನು (ಎಂಟುನೂರ ಐವತ್ತು ಲಕ್ಷಗಳು ಮಾತ್ರ) ಬಿಡುಗಡೆ ಮಾಡಲಾಗಿದೆ.

2. ಬಿಡುಗಡೆಯಾದ ಮೊತ್ತವನ್ನು ಮಂಡಳಿಯ ವೈಯಕ್ತಿಕ ಖಾತೆಯಲ್ಲಿ ಮೊದಲು ಇಟ್ಟು ನಂತರ ಕಾರ್ಯಕ್ರಮದ ಅನುಗುಣವಾಗಿ ಖರ್ಚು ಮಾಡತಕ್ಕದ್ದು. ನಿಯಮಾನುಸಾರ ಹಣ ಬಳಕೆ ದೃಢೀಕರಣ ಪತ್ರವನ್ನು 2010-11ರ ಸಾಲಿನಲ್ಲಿ ಮಂಡಳಿಯ ಕಾರ್ಯದರ್ಶಿಯವರು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್ 1 ಟಿಎಫ್‌ಪಿ 2008, ದಿನಾಂಕ: 16/05/2008ರಲ್ಲಿ ಸರ್ಕಾರದ ಪ್ರಧಾನ ಕಾರ್ಯದರ್ಶಿಯವರಿಗೆ ನೀಡಲಾದ ಅಧಿಕಾರ ಪ್ರತ್ಯಾಯೋಜನೆಯನ್ವಯ ಹೊರಡಿಸಲಾಗಿದೆ..

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
ಬಿ. ಚಿಕ್ಕರಾಜು
ಸರ್ಕಾರದ ಅಧೀನ ಕಾರ್ಯದರ್ಶಿ 1 & 2,
ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ.

ಪಿ.ಆರ್: 1357

## ಪಶುಸಂಗೋಪನೆ ಮತ್ತು ಮೀನುಗಾರಿಕೆ ಸಚಿವಾಲಯ

**ವಿಷಯ :** 73 ನಿವೃತ ಪಶುವೈದ್ಯಾಧಿಕಾರಿಗಳನ್ನು ಒಂದು ವರ್ಷದ ಅವಧಿಗೆ ಗುತ್ತಿಗೆ ಆಧಾರದ ಮೇಲೆ ಮರು ನೇಮಿಸಿಕೊಳ್ಳಲು ಮಂಜೂರಾತಿ ನೀಡುವಿಕೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ: ಪಸಂಮೀ 116 ಪಸಸೇ 2008, ದಿನಾಂಕ: 11/07/2008.
2. ಪತ್ರ ಸಂಖ್ಯೆ: ಆಪಸಂ/ಸಿಬ್ಬಂದಿ-2/ವಿವ-97/08-09(ಭಾಗ-2), ದಿನಾಂಕ: 25/11/2010 ಮತ್ತು ದಿನಾಂಕ: 13/12/2010.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮಸಂಖ್ಯೆ (1)ರ ಆದೇಶದಲ್ಲಿ ಕರ್ನಾಟಕ ನಾಗರೀಕ ಸೇವೆಗಳು (ಸಾಮಾನ್ಯ ನೇಮಕಾತಿ) ನಿಯಮಗಳು, 1977ರ ನಿಯಮ 15ರ ಪ್ರಕಾರ 65 ವರ್ಷ ವಯೋಮಿತಿ ಒಳಗಿನ 100 ನಿವೃತ್ತ ಪಶುವೈದ್ಯಾಧಿಕಾರಿಗಳನ್ನು ಎರಡು ವರ್ಷಗಳ ಅವಧಿಗೆ ಗುತ್ತಿಗೆ ಆಧಾರದ ಮೇಲೆ ತಿಂಗಳೊಂದಕ್ಕೆ ಸಂಚಿತ ವೇತನ ರೂ. 12,000/-ರಂತೆ ಹಲವು ಷರತ್ತು ಮತ್ತು ನಿಬಂಧನೆಗಳಿಗೊಳಪಟ್ಟು ನೇಮಿಸಿಕೊಳ್ಳಲು ಅನುಮತಿ ನೀಡಲಾಗಿತ್ತು.

2. ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಪತ್ರಗಳಲ್ಲಿ ಆಯುಕ್ತರು, ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ, ಬೆಂಗಳೂರು ಇವರು ಒಟ್ಟು 94 ಹುದ್ದೆಗಳಿಗೆ ನಿವೃತ್ತ ಪಶುವೈದ್ಯಾಧಿಕಾರಿಗಳನ್ನು 2 ವರ್ಷಗಳ ಅವಧಿಗೆ ನೇಮಕಾತಿ ನೀಡಿ ವಿವಿಧ ದಿನಾಂಕಗಳಂದು ಅಂದರೆ ದಿನಾಂಕ: 01/12/2008, 01/09/2009 ಮತ್ತು 21/07/2010ರಂದು ವಿವಿಧ ಸ್ಥಳಗಳಿಗೆ ನಿಯುಕ್ತಿಗೊಳಿಸಿದ್ದು, ಇದರಲ್ಲಿ ಕರ್ತವ್ಯದ ಮೇಲೆ ಹಾಜರಾಗದಿರುವ, ರಾಜೀನಾಮೆ ನೀಡಿರುವ ಹಾಗೂ ಸೇವೆಯಿಂದ ತೆಗೆದುಹಾಕಿರುವ 21 ಅಧಿಕಾರಿಗಳನ್ನು ಹೊರತುಪಡಿಸಿ 73 ನಿವೃತ್ತ ಪಶುವೈದ್ಯಾಧಿಕಾರಿಗಳು ಗುತ್ತಿಗೆ ಆಧಾರದ ಮೇಲೆ ಕಾರ್ಯನಿರ್ವಹಿಸುತ್ತಿದ್ದಾರೆಂದು ಹಾಗೂ ಕರ್ತವ್ಯಕ್ಕೆ ಹಾಜರಾದ 73 ನಿವೃತ್ತ ಪಶುವೈದ್ಯಾಧಿಕಾರಿಗಳ ಪೈಕಿ ಮೊದಲ ಹಂತ ಅಂದರೆ ದಿನಾಂಕ: 01/12/2008ರಂದು ನೇಮಕಗೊಂಡ 63 ಪಶುವೈದ್ಯಾಧಿಕಾರಿಗಳ ಗುತ್ತಿಗೆ ಅವಧಿಯು ಡಿಸೆಂಬರ್ 2010ಕ್ಕೆ ಮುಕ್ತಾಯಗೊಳ್ಳುತ್ತದೆಂದು ತಿಳಿಸಿರುತ್ತಾರೆ. ಇಲಾಖೆಯಲ್ಲಿ ಹೆಚ್ಚಿನ ಪ್ರಮಾಣದ ಪಶುವೈದ್ಯಾಧಿಕಾರಿಗಳ ಹುದ್ದೆ ಖಾಲಿ ಇರುವ ಕಾರಣ ವಿಶೇಷ ನೇಮಕಾತಿ ನಿಯಮದಡಿ 287 ಹುದ್ದೆಗಳನ್ನು ಭರ್ತಿ ಮಾಡಲು ಹೊರಡಿಸಿದ ಅಧಿಸೂಚನೆಗೆದುರಾಗಿ 211 ಅಭ್ಯರ್ಥಿಗಳು ಮಾತ್ರ ಆಯ್ಕೆಯಾಗಿದ್ದು, ಸದರಿ ನೇಮಕಾತಿ ಪ್ರಕ್ರಿಯೆ ಪೂರ್ಣಗೊಂಡರೂ ಸಹ ಇಲಾಖೆಯಲ್ಲಿ ಪಶುವೈದ್ಯಾಧಿಕಾರಿಗಳ ಹುದ್ದೆಗಳು ಖಾಲಿ ಉಳಿಯುತ್ತದೆಂದು ತಿಳಿಸಿರುತ್ತಾರೆ. 73 ನಿವೃತ್ತ ಪಶುವೈದ್ಯಾಧಿಕಾರಿಗಳ ಪೈಕಿ 10 ಅಧಿಕಾರಿಗಳು ಮಾತ್ರ 65 ವರ್ಷ ವಯೋಮಿತಿ ಮೀರಿರುತ್ತಾರೆಂದು ಉಳಿದ 63 ಅಧಿಕಾರಿಗಳು 65 ವರ್ಷ ವಯೋಮಿತಿಗೆ ಒಳಪಟ್ಟಿರುತ್ತಾರೆಂದು, ಗುತ್ತಿಗೆ ಆಧಾರದ ಮೇಲೆ ಕಾರ್ಯನಿರ್ವಹಿಸುತ್ತಿರುವ 73 ಪಶುವೈದ್ಯಾಧಿಕಾರಿಗಳಿಗೆ ತಲಾ ರೂ. 13,000/- ಸಂಚಿತ ವೇತನದಂತೆ

ತಿಂಗಳಿಗೆ ರೂ. 9,49,000–00 ವಾರ್ಷಿಕ ರೂ. 1,13,88,000–00 ವೆಚ್ಚವಾಗಲಿದ್ದು, ಸದರಿ ವೆಚ್ಚವನ್ನು ನಿಗದಿತ ವೇತನ ಬಾಬ್ತಿನಲ್ಲಿ ಸಂಬಂಧಿತ ಜಿಲ್ಲಾ ಪಂಚಾಯತ್ ಮತ್ತು ತಾಲ್ಲೂಕು ಪಂಚಾಯತ್‌ಗಳ ಲೆಕ್ಕಶೀರ್ಷಿಕೆಗಳಲ್ಲಿ ಭರಿಸಲಾಗುವುದರಿಂದ ಹೆಚ್ಚುವರಿ ವಂಟನದ ಅವಶ್ಯಕತೆ ಇರುವುದಿಲ್ಲವೆಂದು ತಿಳಿಸಿರುತ್ತಾರೆ. ಇಲಾಖಾ ಹಿತದೃಷ್ಟಿಯಿಂದ ಹಾಲಿ ಗುತ್ತಿಗೆ ಆಧಾರದ ಮೇಲೆ ಕಾರ್ಯನಿರ್ವಹಿಸುತ್ತಿರುವ 73 ನಿವೃತ್ತ ಪಶುವೈದ್ಯಾಧಿಕಾರಿಗಳ ಗುತ್ತಿಗೆ ಸೇವೆಯನ್ನು ತಿಂಗಳಿಗೆ ರೂ. 13,000–00 ಸಂಚಿತ ವೇತನದ ಮೇಲೆ ಮತ್ತೆ ಒಂದು ವರ್ಷದ ಅವಧಿಗೆ ಮುಂದುವರೆಸುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

3. ಆಯುಕ್ತರ ಪ್ರಸ್ತಾವನೆಯನ್ನು ಪರಿಶೀಲಿಸಲಾಯಿತು. ಪ್ರಸ್ತುತ ಇಲಾಖೆಯಲ್ಲಿ 770 ಪಶುವೈದ್ಯಾಧಿಕಾರಿ ಹುದ್ದೆಗಳು ಖಾಲಿ ಇರುವುದರಿಂದ ಗ್ರಾಮಾಂತರ ಪ್ರದೇಶದ ಜಾನುವಾರುಗಳ ಚಿಕಿತ್ಸೆಗೆ ಹಾಗೂ ರೈತಾಪಿ ವರ್ಗಕ್ಕೆ ಅನಾನುಕೂಲವಾಗಿರುತ್ತದೆ. ಇತ್ತೀಚಿನ 211 ಅಭ್ಯರ್ಥಿಗಳ ನೇಮಕಾತಿ ನಂತರವು ಇಲಾಖೆಯಲ್ಲಿ ಸಾಕಷ್ಟು ಪ್ರಮಾಣದಲ್ಲಿ ಪಶುವೈದ್ಯಾಧಿಕಾರಿ ಹುದ್ದೆಗಳು ಖಾಲಿ ಉಳಿದಿರುತ್ತದೆ. ಜಾನುವಾರು ರೋಗದ ಉಸ್ತುವಾರಿ ಮತ್ತು ಸರ್ವೇಕ್ಷಣಾ ಘಟಕಗಳ ರಚನೆ ಹಾಗೂ ಕೃಷಿ ವಿಕಾಸ ಯೋಜನೆ ಅಡಿಯಲ್ಲಿ ವಿವಿಧ ಅಭಿವೃದ್ಧಿ ಕಾರ್ಯಕ್ರಮಗಳನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸುವಲ್ಲಿ ತೊಂದರೆಯಾಗುತ್ತಿದೆ. ನಿವೃತ್ತ ಪಶುವೈದ್ಯಾಧಿಕಾರಿಗಳ ಎರಡು ವರ್ಷಗಳ ಗುತ್ತಿಗೆ ಅವಧಿಯು ಡಿಸೆಂಬರ್–2010ಕ್ಕೆ ಮುಕ್ತಾಯಗೊಂಡಿರುತ್ತದೆ. ಆದರೆ ಪಶುವೈದ್ಯಾಧಿಕಾರಿಗಳ ಕೊರತೆಯ ಹಿನ್ನೆಲೆಯಲ್ಲಿ ನಿವೃತ್ತ ಪಶುವೈದ್ಯಾಧಿಕಾರಿಗಳ ಸೇವೆಯು ಇಲಾಖೆಗೆ ಅವಶ್ಯಕವಾಗಿರುತ್ತದೆ. ಈ ಎಲ್ಲಾ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿದ ಸರ್ಕಾರ, ಇಲಾಖಾ ಕಾರ್ಯಕ್ರಮಗಳು, ಜಾನುವಾರುಗಳ ಚಿಕಿತ್ಸೆ ಮತ್ತು ರೈತಾಪಿ ವರ್ಗದ ಹಿತದೃಷ್ಟಿಯಿಂದ 66 ವರ್ಷ ವಯೋಮಿತಿಯೊಳಗಿರುವ 73 ನಿವೃತ್ತ ಪಶುವೈದ್ಯಾಧಿಕಾರಿಗಳನ್ನು ಒಂದು ವರ್ಷದ ಅವಧಿಗೆ ಗುತ್ತಿಗೆ ಆಧಾರದ ಮೇಲೆ ತಿಂಗಳಿಗೆ ರೂ. 13,000–00 ಸಂಚಿತ ವೇತನದ ಆಧಾರದ ಮೇಲೆ ಮರು ನೇಮಿಸಿಕೊಳ್ಳಲು ತೀರ್ಮಾನಿಸಿದೆ. ಆದ್ದರಿಂದ, ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಪಸಂಮೀ 406 ಪಸಸೇ 2010 ಬೆಂಗಳೂರು, ದಿನಾಂಕ: 12ನೇ ಮೇ 2011.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ವಿಷಯವನ್ನು ಕೂಲಂಕಷವಾಗಿ ಪರಿಶೀಲಿಸಿದ ಸರ್ಕಾರ, 66 ವರ್ಷ ವಯೋಮಿತಿಯೊಳಗಿರುವ 73 ನಿವೃತ್ತ ಪಶುವೈದ್ಯಾಧಿಕಾರಿಗಳನ್ನು ಅವರು ಮರು ನೇಮಕವಾದ ದಿನಾಂಕದಿಂದ ಒಂದು ವರ್ಷದ ಅವಧಿಗೆ ಗುತ್ತಿಗೆ ಆಧಾರದ ಮೇಲೆ ಪ್ರತಿ ತಿಂಗಳಿಗೆ ರೂ. 13,000–00 (ಹದಿಮೂರು ಸಾವಿರ ರೂಪಾಯಿಗಳು ಮಾತ್ರ) ಸಂಚಿತ ವೇತನದ ಮೇಲೆ ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು, 1977ರ ನಿಯಮ 15ರ ಅನುಸಾರ ಈ ಆದೇಶಕ್ಕೆ ಲಗತ್ತಿಸಿರುವ ಅನುಬಂಧದಲ್ಲಿನ ಷರತ್ತಿಗೊಳಪಟ್ಟು ಮರುನೇಮಕಾತಿ ಮಾಡಿಕೊಳ್ಳಲು ಮಂಜೂರಾತಿ ನೀಡಲಾಗಿದೆ.

ಗುತ್ತಿಗೆ ನೇಮಕಾತಿಗೆ ತಗಲುವ ವೆಚ್ಚವನ್ನು ಸಂಬಂಧಿತ ಜಿಲ್ಲಾ ಪಂಚಾಯತ್ / ತಾಲ್ಲೂಕು ಪಂಚಾಯತ್ ಲೆಕ್ಕಶೀರ್ಷಿಕೆಯಲ್ಲಿಯೇ ಭರಿಸತಕ್ಕದ್ದು. ಈ ಉದ್ದೇಶಕ್ಕಾಗಿ ಸರ್ಕಾರದಿಂದ ಹೆಚ್ಚುವರಿ ಅನುದಾನ ಕೋರತಕ್ಕದ್ದಲ್ಲ.

ಈ ಆದೇಶವನ್ನು ಆರ್ಥಿಕ ಇಲಾಖೆ ದಿನಾಂಕ: 08/02/2011ರಂದು ಟಿಪ್ಪಣಿ ಸಂಖ್ಯೆ: ಆಇ 454 ವೆ.4/2010ರಲ್ಲಿ ನೀಡಿದ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
ಟಿ. ರಂಗನಾಥ
ಪೀಠಾಧಿಕಾರಿ–2 (ಪ್ರ)
ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ,
(ಪಶುಸಂಗೋಪನೆ–ಎ)

## ಸರ್ಕಾರಿ ಆದೇಶ ಸಂಖ್ಯೆ: ಪಸಂಮೀ 406 ಪಸಸೇ 2010, ದಿನಾಂಕ: 12/05/2011ಕ್ಕೆ ಅನುಬಂಧ

1. ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆಯಲ್ಲಿ ನಿವೃತ್ತ ಪಶುವೈದ್ಯಾಧಿಕಾರಿಗಳನ್ನು ಪಶುವೈದ್ಯಾಧಿಕಾರಿಗಳ ಹುದ್ದೆಯಲ್ಲಿ ಗುತ್ತಿಗೆ ಮೇಲೆ ನೇಮಕಗೊಂಡಿರುವ ಡಾ: ರವರ ಗುತ್ತಿಗೆ ನೇಮಕಾತಿ ಒಂದು ವರ್ಷ ಅಥವಾ ಮುಂದಿನ ಆದೇಶ ಹೊರಡಿಸುವವರೆಗೆ ಇವರೆಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಮಾತ್ರ ಇದ್ದು, ಇದೊಂದು ತಾತ್ಕಾಲಿಕ ನೇಮಕಾತಿ ಆಗಿರುತ್ತದೆ.
2. ಡಾ: .ರವರು ಪಡೆಯುತ್ತಿರುವ ನಿವೃತ್ತಿ ವೇತನದೊಂದಿಗೆ ರೂ. 13,000–00 ಮರು ನೇಮಕಾತಿ ವೇತನವನ್ನು ಪಡೆಯಲು ಅರ್ಹರಾಗಿರುತ್ತಾರೆ ಹಾಗೂ ಅವರು ಪಡೆಯುತ್ತಿರುವ ನಿವೃತ್ತಿ ವೇತನದ ಮೇಲೆ ತುಟ್ಟಿಭತ್ಯೆ ಮಾತ್ರ ಪಡೆಯಲು ಅರ್ಹರಿರುತ್ತಾರೆಯೇ ವಿನ: ಬೇರೆ ಯಾವುದೇ ಭತ್ಯೆಗಳನ್ನು ಪಡೆಯುವಂತಿಲ್ಲ.
3. ಸದರಿ ಗುತ್ತಿಗೆ ನೌಕರರು ಸಾರ್ವಜನಿಕ ಹಿತದೃಷ್ಟಿಯಿಂದ ಪ್ರಯಾಣ ಮಾಡಲೇ ಬೇಕಾದಲ್ಲಿ ಮಾತ್ರ ಅವರು ನೇಮಕಾತಿ ಹೊಂದಿರುವ ಹುದ್ದೆಯ ಕಾಲಿಕ ವೇತನ ಶ್ರೇಣಿಯ ಕನಿಷ್ಠ ವೇತನದ ಮೇಲೆ ನಿಯಮಾನುಸಾರ ಲಭ್ಯವಿರುವ ಪ್ರಯಾಣ ಭತ್ಯೆ ಮತ್ತು ದಿನಭತ್ಯೆಯನ್ನು ಪಡೆಯಲು ಅರ್ಹರಾಗಿರುತ್ತಾರೆ.
4. ಸದರಿ ಗುತ್ತಿಗೆ ಪಶುವೈದ್ಯಾಧಿಕಾರಿಗಳು ವಾರ್ಷಿಕ 15 ದಿನಗಳ ಸಾಂದರ್ಭಿಕ ರಜೆ ಮತ್ತು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ ನಿಯಮ 150ರ ಪ್ರಕಾರ ಗಳಿಕೆ ರಜೆ ಪಡೆಯಲು ಅರ್ಹರಾಗಿರುತ್ತಾರೆ.
5. ಒಪ್ಪಂದದ ಷರತ್ತು ಮತ್ತು ನಿಬಂಧನೆಗಳಲ್ಲಿ ನೀಡಿರುವ ಸೌಲಭ್ಯಗಳ ಹೊರತಾಗಿ ಬೇರಾವುದೇ ಸೌಲಭ್ಯಕ್ಕೆ ಅಂದರೆ ವೇತನಬಡ್ತಿ, ಪದೋನ್ನತಿ, ಪಿಂಚಣಿ ಇತ್ಯಾದಿ ಸೌಲಭ್ಯಗಳಿಗೆ ಸದರಿ ಗುತ್ತಿಗೆ ಪಶುವೈದ್ಯಾಧಿಕಾರಿಗಳು ಅರ್ಹರಾಗಿರುವುದಿಲ್ಲ.
6. ಸದರಿ ಗುತ್ತಿಗೆ ಪಶುವೈದ್ಯಾಧಿಕಾರಿಗಳು ಅವರ ದುರ್ವರ್ತನೆ, ನಿರ್ಲಕ್ಷತೆಯ ನಿಮಿತ್ತ ಸರ್ಕಾರಕ್ಕೆ ಸಂಭವಿಸಹುದಾದ ಎಲ್ಲಾ ನಷ್ಟಗಳನ್ನು ಸರ್ಕಾರಕ್ಕೆ ಭರಿಸಿಕೊಡಲು ಬದ್ಧರಾಗಿರತಕ್ಕದ್ದು.
7. ಸದರಿ ಮರುನೇಮಕಾತಿಯ ಅವಧಿಯ ಸೇವೆಯನ್ನು ನಿವೃತ್ತಿ ವೇತನ ಹಾಗು ಇತರ ಸೌಲಭ್ಯಗಳಿಗೆ ಅರ್ಹತಾದಾಯಕ ಸೇವೆಯೆಂದು ಪರಿಗಣಿಸುವುದಿಲ್ಲ.

8. ಅವರ ಕರ್ತವ್ಯ – ಜವಾಬ್ದಾರಿ ಹಾಗೂ ಅವರಿಗೆ ವಹಿಸಿರುವ ಕಾರ್ಯ–ಪ್ರಕಾರ್ಯಗಳನ್ನು ಶ್ರದ್ಧೆ, ಭಕ್ತಿ ಮತ್ತು ಆಸಕ್ತಿಯಿಂದ ನೆರವೇರಿಸುವುದು.
9. ಅವರು ಕರ್ತವ್ಯವನ್ನು ಪಾಲಿಸುತ್ತಿರುವಾಗ ಅಥವಾ ಕರ್ತವ್ಯ ನೆರವೇರಿಸುತ್ತಿರುವಾಗ ಅವರಿಗೆ ಲಭ್ಯವಾಗಬಹುದಾದ ಅಥವಾ ದೊರಕಬಹುದಾದ ಅಧಿಕೃತ ಮಾಹಿತಿಯನ್ನು ಗೌಪ್ಯವಾಗಿಟ್ಟು ಕಟ್ಟುನಿಟ್ಟಾಗಿ ಪಾಲಿಸಬೇಕು.
10. ಅವರು ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಾವಳಿ 1966 ಹಾಗು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ಕ್ಕೆ ಬದ್ಧರಾಗಿರತಕ್ಕದ್ದು.
11. ಈ ಒಪ್ಪಂದದ ಷರತ್ತುಗಳನ್ನು ಉಲ್ಲಂಘಿಸಿದಲ್ಲಿ ಯಾವುದೇ ಮುನ್ಸೂಚನೆ ಇಲ್ಲದೆ ಗುತ್ತಿಗೆ ನೇಮಕಾತಿಯು ತಾನಾಗಿಯೇ ಮುಕ್ತಾಯವಾಗುತ್ತದೆ.
12. ಗುತ್ತಿಗೆ ಪಶುವೈದ್ಯಾಧಿಕಾರಿಗಳು ದುರ್ನಡತೆಯಿಂದಾಗಲೀ ಅಥವಾ ನಿರ್ಲಕ್ಷತೆ, ಉದಾಸೀನತೆಯಿಂದಾಗಲೀ ಸರ್ಕಾರಕ್ಕೆ ಸಂಬಂಧಿಸಿದಂತೆ ಆಗಲಿರುವ ಆರ್ಥಿಕ ನಷ್ಟವನ್ನು ಅವರು ಸರ್ಕಾರಕ್ಕೆ ತುಂಬಿಕೊಡಲು ಹೊಣೆಗಾರರಾಗಿರುತ್ತಾರೆ.
13. ನೇಮಕಾತಿ ಆದೇಶವನ್ನು ಸ್ವೀಕರಿಸಿದ ದಿನಾಂಕದಿಂದ ಏಳು ದಿನಗಳ ಒಳಗಾಗಿ ಐವತ್ತು (ರೂ.50.00) ರೂಪಾಯಿಗಳ ಮೌಲ್ಯದ ಛಾಪಾ ಕಾಗದದಲ್ಲಿ ಸದರಿ ನೇಮಕಾತಿಯ ಷರತ್ತು ಮತ್ತು ನಿಬಂಧನೆಗಳನ್ನು ಒಳಗೊಂಡಿರುವ ಕರಾರು ಪತ್ರವನ್ನು ಕ್ರಮಬದ್ಧ ರೀತಿಯಲ್ಲಿ ಸದರಿ ಗುತ್ತಿಗೆ ಪಶುವೈದ್ಯಾಧಿಕಾರಿಗಳಿಂದ ಬರೆಸಿಕೊಳ್ಳತಕ್ಕದ್ದು.

ಟಿ. ರಂಗನಾಥ
ಪೀಠಾಧಿಕಾರಿ–2(ಪ್ರ),
ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ,
(ಪಶುಸಂಗೋಪನೆ–ಎ).

ಪಿ.ಆರ್. 1358

## ಪಶುಸಂಗೋಪನೆ ಮತ್ತು ಮೀನುಗಾರಿಕೆ ಸಚಿವಾಲಯ

**ವಿಷಯ :** ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆಯಲ್ಲಿ ನಿಯೋಜನೆ ಮೇಲೆ ಕಾರ್ಯನಿರ್ವಹಿಸುತ್ತಿರುವ ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆಯ 8 ಸಹಾಯಕ ನಿರ್ದೇಶಕರುಗಳನ್ನು ಮಾತೃ ಇಲಾಖೆಗೆ ಹಿಂದಕ್ಕೆ ಪಡೆಯಲು ಆದೇಶಿಸಿರುವ ಅಧಿಸೂಚನೆಯನ್ನು ವಾಪಸ್ ಪಡೆಯುವ ಬಗ್ಗೆ.

**ಉಲ್ಲೇಖ :** 1. ಸರ್ಕಾರಿ ಅಧಿಸೂಚನೆ ಸಂಖ್ಯೆ: ಪಸಂಮೀ 199 ಪಅಸೇ 2007 (ಭಾ) ದಿನಾಂಕ: 21/03/2011.
2. ಅನಧಿಕೃತ ಟಿಪ್ಪಣಿ ಸಂಖ್ಯೆ: ಗ್ರಾಅಪ 28 ಪಬವ 2009, ದಿನಾಂಕ: 11/04/2011.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಸರ್ಕಾರಿ ಅಧಿಸೂಚನೆಯಲ್ಲಿ ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆಯಿಂದ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆಯಲ್ಲಿ ತಾಲ್ಲೂಕು ಪಂಚಾಯತ್ ಕಾರ್ಯನಿರ್ವಹಣಾಧಿಕಾರಿಯಾಗಿ ನಿಯೋಜನಾ ಮೇಲೆ ತೆರಳಿದ್ದ ಸಹಾಯಕ ನಿರ್ದೇಶಕರುಗಳ ಪೈಕಿ ಗರಿಷ್ಠ 5 ವರ್ಷ ನಿಯೋಜನಾ ಅವಧಿಯನ್ನು ಪೂರ್ಣಗೊಳಿಸಿದ್ದ ಡಾ: ವಿ.ಕೆ. ದೇಶಪಾಂಡೆ, ಡಾ: ಎಂ.ಹೆಚ್. ತಿಪ್ಪೇಸ್ವಾಮಿ, ಡಾ: ಕೆ.ವಿ. ದೇವರಾಜುಲು, ಡಾ: ಆರ್.ಸಿ. ಕಮತ್, ಡಾ: ಹೆಚ್.ಸಿ. ಚಂದ್ರಶೇಖರಪ್ಪ, ಡಾ: ಕೆ.ವಿ. ನಾಗರಾಜು, ಡಾ: ಬಿ. ವೀರಭದ್ರಪ್ಪ ಹಾಗೂ ಡಾ: ಎಸ್. ಶಶಿಕುಮಾರ್, ಸಹಾಯಕ ನಿರ್ದೇಶಕರು ಇವರುಗಳ ನಿಯೋಜನಾ ಸೇವೆಯನ್ನು ಇಲಾಖಾ ಹಿತದೃಷ್ಟಿಯಿಂದ ರದ್ದುಪಡಿಸಿ, ಅವರುಗಳ ಸೇವೆಯನ್ನು ಮಾತೃ ಇಲಾಖೆಗೆ ಹಿಂದಕ್ಕೆ ಪಡೆಯಲಾಗಿತ್ತು.

2. ಮೇಲೆ ಓದಲಾದ ಕ್ರಮಸಂಖ್ಯೆ (2)ರ ಅನಧಿಕೃತ ಟಿಪ್ಪಣಿಯಲ್ಲಿ ಸರ್ಕಾರದ ಅಧೀನ ಕಾರ್ಯದರ್ಶಿ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ, ಬೆಂಗಳೂರು ಇವರು ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆಯಿಂದ ನಿಯೋಜನೆ ಮೇಲೆ ತಾಲ್ಲೂಕು ಪಂಚಾಯತ್ ಕಾರ್ಯನಿರ್ವಹಣಾಧಿಕಾರಿಯಾಗಿ ಕಾರ್ಯನಿರ್ವಹಿಸುತ್ತಿದ್ದ ಎಲ್ಲಾ ಸಹಾಯಕ ನಿರ್ದೇಶಕರುಗಳ ಸೇವೆಯನ್ನು ದಿನಾಂಕ: 28/01/2009ರ ಅಧಿಸೂಚನೆಯಲ್ಲಿ ಮಾತೃ ಇಲಾಖೆಗೆ ಬಿಡುಗಡೆಗೊಳಿಸಿದ್ದು, ಇದರಿಂದ ಬಾಧಿತರಾದ ಅಧಿಕಾರಿಗಳು ಕರ್ನಾಟಕ ಆಡಳಿತ ನ್ಯಾಯಮಂಡಳಿಯಲ್ಲಿ ಅರ್ಜಿ ಸಂಖ್ಯೆ: 449/2009 C/w ಕರ್ನಾಟಕ ಆಡಳಿತ ನ್ಯಾಯಮಂಡಳಿಯಲ್ಲಿ ಅರ್ಜಿ ಸಂಖ್ಯೆ 450–458/2009, 477–478/2009, 489–491/2009ಗಳನ್ನು ದಾಖಲಿಸಿ ದಿನಾಂಕ: 28/01/2009ರ ಆದೇಶವನ್ನು ಅನೂರ್ಜಿತಗೊಳಿಸಲು ಕೋರಿದ್ದು ಈ ಸಂಬಂಧ ಕರ್ನಾಟಕ ಆಡಳಿತ ನ್ಯಾಯಮಂಡಳಿ ದಿನಾಂಕ: 30/01/2009ರಂದು ಮಧ್ಯಂತರ ಆದೇಶವನ್ನು ನೀಡಿ ದಿನಾಂಕ: 28/01/2009ರ ಆದೇಶವನ್ನು ಜಾರಿಗೊಳಿಸಿದಂತೆ ತಡೆಯಾಜ್ಞೆ ನೀಡಿ, ಸದರಿ ತಡೆಯಾಜ್ಞೆಯನ್ನು ಕಾಲಕಾಲಕ್ಕೆ ಮುಂದುವರೆಸಿ ವಿಸ್ತರಿಸಿರುವುದರಿಂದ ಹಾಗೂ ಸದರಿ ಅರ್ಜಿಗಳಲ್ಲಿ ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆಯು ದಿನಾಂಕ: 21/03/2011ರ ಅಧಿಸೂಚನೆಯಲ್ಲಿ ಸೇವೆಯನ್ನು ಹಿಂದಕ್ಕೆ ಪಡೆದಿರುವ 8 ಜನ ಸಹಾಯಕ ನಿರ್ದೇಶಕರುಗಳೂ ಸಹ ಅರ್ಜಿದಾರರಾಗಿರುವುದರಿಂದ ಮತ್ತು ಈ ಪ್ರಕರಣವು ನ್ಯಾಯಮಂಡಳಿಯ ವ್ಯಾಪ್ತಿಯಲ್ಲಿದ್ದು, ನ್ಯಾಯಮಂಡಳಿಯು ತಡೆಯಾಜ್ಞೆ ನೀಡಿರುವ ಹಿನ್ನೆಲೆಯಲ್ಲಿ ಹಾಗೂ ಸದರಿ ಅರ್ಜಿಗಳಲ್ಲಿ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆಯನ್ನು ಒಂದನೇ ಪ್ರತಿವಾದಿಯಾಗಿರುವುದರಿಂದ ಹಾಗೂ ಪಶುಸಂಗೋಪನಾ ಮತ್ತು ಮೀನುಗಾರಿಕೆ ಇಲಾಖೆಯು ಎರಡನೇ ಪ್ರತಿವಾದಿಯಾಗಿರುವುದರಿಂದ ಸದ್ಯದ ಪರಿಸ್ಥಿತಿಯಲ್ಲಿ ದಿನಾಂಕ: 21/03/2011ರ ಅಧಿಸೂಚನೆಯನ್ವಯ ಪಟ್ಟಿ ಮಾಡಿರುವ 8 ಅಧಿಕಾರಿಗಳ ಸೇವೆಯನ್ನು ಮಾತೃ ಇಲಾಖೆಗೆ ಬಿಡುಗಡೆಗೊಳಿಸಲು ಆಸ್ಪದವಿರುವುದಿಲ್ಲವೆಂದು ಹಾಗೂ ಪ್ರಕರಣದಲ್ಲಿ ಅಂತಿಮ ತೀರ್ಪು ಹೊರಬಂದ ನಂತರ ಅಥವಾ ಹಾಲಿ ಇರುವ ತಡೆಯಾಜ್ಞೆ ತೆರವಾದ ನಂತರ, ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಯಥಾಸ್ಥಿತಿಯನ್ನು ಮುಂದುವರೆಸಲಾಗಿದೆ ಎಂದು ತಿಳಿಸಿರುತ್ತಾರೆ.

**ಸರ್ಕಾರದ ಆದೇಶ ಸಂಖ್ಯೆ: ಪಸಂಮೀ 199 ಪಅಸೇ 2007 (ಭಾಗ), ಬೆಂಗಳೂರು, ದಿನಾಂಕ: 16/05/2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿದ ಸರ್ಕಾರ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆಯಲ್ಲಿ ಗರಿಷ್ಠ 5 ವರ್ಷ ನಿಯೋಜನಾ ಅವಧಿಯನ್ನು ಪೂರ್ಣಗೊಳಿಸಿದ್ದ ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆಯ ಡಾ: ವಿ.ಕೆ. ದೇಶಪಾಂಡೆ, ಡಾ: ಎಂ.ಹೆಚ್. ತಿಪ್ಪೇಸ್ವಾಮಿ, ಡಾ: ಕೆ.ವಿ. ದೇವರಾಜುಲು, ಡಾ: ಆರ್.ಸಿ. ಕಮತ್, ಡಾ: ಹೆಚ್.ಸಿ. ಚಂದ್ರಶೇಖರಪ್ಪ, ಡಾ: ಕೆ.ವಿ. ನಾಗರಾಜು, ಡಾ: ಬಿ. ವೀರಭದ್ರಪ್ಪ ಹಾಗೂ ಡಾ: ಎಸ್. ಶಶಿಕುಮಾರ್, ಸಹಾಯಕ ನಿರ್ದೇಶಕರುಗಳು, ಇವರುಗಳ ನಿಯೋಜನಾ ಸೇವೆಯನ್ನು ರದ್ದುಪಡಿಸಿ ಮಾತೃ ಇಲಾಖೆಗೆ ಹಿಂದಕ್ಕೆ ಪಡೆಯಲು ಆದೇಶಿಸಿರುವ ಸರ್ಕಾರಿ ಅಧಿಸೂಚನೆ ಸಂಖ್ಯೆ: ಪಸಂಮೀ 199 ಪಅಸೇ 2007(ಭಾ), ದಿನಾಂಕ: 21/03/2011ನ್ನು ತಕ್ಷಣದಿಂದ ಜಾರಿಗೆ ಬರುವಂತೆ ವಾಪಸ್ಸು ಪಡೆಯಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
ಬಿ.ಕೆ. ಶ್ರೀನಿವಾಸಮೂರ್ತಿ
ಸರ್ಕಾರದ ಅಧೀನ ಕಾರ್ಯದರ್ಶಿ
ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ
ಪಶುಸಂಗೋಪನೆ

ಪಿ.ಆರ್. 1359

## ENERGY SECRETARIAT

**Sub :-** Evolving Power Sector Strategies for Karnataka.
**Read :-** Government Order No: EN 53 PPC 2010 dated 14/06/2011.

**Preamble:**

1. In Government Order read at above, Government has accorded approval to Study, the various issues relating to Energy Sector in Karnataka and to submit action plan for Karnataka State Power Sector.
2. M/s. Feedback Ventures Private Limited have furnished a presentation on action plan for Karnataka State power Sector (11/02/2011).
3. Government felt that a Committee needs to be constituted to examine the action plan of M/s. Feedback Ventures Private Limited and suggest Committee's recommendations along with the action plan to Government. Hence the following order.

**Government Order No. EN 53 PPC 2010 Bangalore, Dated : 13/05/2011**

In the circumstances explained in the preamble, the State Government has constituted a Committee comprising the following Officers to examine the action plan for Karnataka State Power Sector furnished by M/s. Feedback Ventures Private Limited and suggest Committee's recommendations along with the action plan to Govermment within two months.

| | | | |
|---|---|---|---|
| a) | The Managing Dirctor, KPTCL | - | Chairman |
| b) | The Managing Director, KPCL | - | Member |
| c) | The Managing Director, BESCOM | - | Member |
| d) | The Managing Director, MESCOM | - | Member |
| e) | The Managing Director, HESCOM | - | Member |
| f) | The Managing Director, GESCOM | - | Member |
| g) | The Managing Director, CESC | - | Member |
| h) | The Director (Finance), KPTCL | - | Member |
| i) | The Managing Director, PCKL | - | Member/Convenor |
| j) | The General Manager (Finance), KPCL | - | Member |

BY ORDER AND IN THE NAME OF THE GOVERNOR OF KARNATAKA
**SURESH B. KRISHNAPPANAVAR**
UNDER SECRETARY TO GOVERNMENT
ENERGY DEPARTMENT

P.R. 1360

## ಮೂಲಸೌಲಭ್ಯ ಅಭಿವೃದ್ಧಿ ಸಚಿವಾಲಯ

**ವಿಷಯ :** ಮೈಸೂರು ವಿಮಾನ ನಿಲ್ದಾಣದ ವಿದ್ಯುಚ್ಛಕ್ತಿ ಬಿಲ್ಲನ್ನು ಪಾವತಿಸಲು ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :**
1. ಜಿಲ್ಲಾಧಿಕಾರಿಗಳು, ಮೈಸೂರು ಇವರ ಪತ್ರ ಸಂಖ್ಯೆ: ಎಲ್.ಎ.ಕ್ಯೂ.ಸಿ.ಆರ್. 182/2002–03, ದಿನಾಂಕ: 22/11/2010, ದಿನಾಂಕ: 23/12/2010.
2. ಇದೇ ಸಮ ಸಂಖ್ಯೆಯ ಸರ್ಕಾರದ ಪತ್ರ ದಿನಾಂಕ: 10/03/2011.
3. ಸಹಾಯಕ ಕಾರ್ಯನಿರ್ವಾಹಕ ಅಭಿಯಂತರರು, (ವಿ) ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮ, ಚಾಮುಂಡಿಪುರಂ ಇವರ ಪತ್ರ ಸಂಖ್ಯೆ: ಸಕಾನಿಇಂ(ವಿ)/ಚಾಉವಿ/ಕಶಾ/50, ದಿನಾಂಕ: 02/05/2011.
4. ಜಿಲ್ಲಾಧಿಕಾರಿಗಳು, ಮೈಸೂರು ಇವರ ಪತ್ರ ಸಂಖ್ಯೆ: ಎಲ್.ಎ.ಕ್ಯೂ.ಸಿ.ಆರ್. 181/2002–03, ದಿನಾಂಕ: 27/04/2011.

**ಪ್ರಸ್ತಾವನೆ :**

ಮೈಸೂರು ವಿಮಾನ ನಿಲ್ದಾಣದ ಅಭಿವೃದ್ಧಿಗಾಗಿ ರಾಜ್ಯ ಸರ್ಕಾರವು ದಿನಾಂಕ: 06/10/2005 ರಂದು ಭಾರತ ವಿಮಾನ ನಿಲ್ದಾಣಗಳ ಪ್ರಾಧಿಕಾರದೊಂದಿಗೆ ಮಾಡಿಕೊಂಡಿರುವ ಒಪ್ಪಂದದ ಅನುಸಾರ ವಿಮಾನ ನಿಲ್ದಾಣದ ವಿದ್ಯುತ್ ಬಳಕೆ ಬಿಲ್ಲನ್ನು ವಿಮಾನಯಾನ ಸೇವೆ

ಕಾರ್ಯಾರಂಭಗೊಂಡ ದಿನಾಂಕದಿಂದ 5 ವರ್ಷಗಳ ಅವಧಿಗೆ ರಾಜ್ಯ ಸರ್ಕಾರದಿಂದ ಭರಿಸಬೇಕಾಗಿರುತ್ತದೆ. ಅದರಂತೆ ಮೇಲೆ ಓದಲಾದ ಕ್ರಮ ಸಂ. (1)ರ ಪತ್ರದಲ್ಲಿ ಜಿಲ್ಲಾಧಿಕಾರಿಗಳು, ಮೈಸೂರು ಇವರು ಮೈಸೂರು ವಿಮಾನ ನಿಲ್ದಾಣದ ವಿದ್ಯುತ್ ಬಿಲ್ಲಿನ ಮೊತ್ತವನ್ನು ಚಾಮುಂಡೇಶ್ವರಿ ವಿದ್ಯತ್ ನಿಗಮ ನಿಯಮಿತಕ್ಕೆ ಭರಿಸುವ ಬಗ್ಗೆ ಪ್ರಸ್ತಾವನೆಯನ್ನು ಕಳುಹಿಸಿರುತ್ತಾರೆ.

2. ಮೈಸೂರು ವಿಮಾನ ನಿಲ್ದಾಣದಲ್ಲಿ ವಿಮಾನಯಾನ ಸೇವೆ ಕಾರ್ಯರಂಭಗೊಂಡ ದಿನಾಂಕ: 01/10/2010 ರಿಂದ ಅನ್ವಯವಾಗುವಂತಹ ಮೈಸೂರು ವಿಮಾನ ನಿಲ್ದಾಣದ ವಿದ್ಯುತ್ ಬಿಲ್ಲುಗಳನ್ನು ಜಿಲ್ಲಾಧಿಕಾರಿಗಳು, ಮೈಸೂರು ಇವರ ಹಂತದಲ್ಲಿ ಪರಿಶೀಲಿಸಿ ವಿದ್ಯುತ್ ಬಳಕೆ ಮತ್ತು ಅದರ ದರಗಳ ಬಗ್ಗೆ ಖಚಿತಪಡಿಸಿಕೊಂಡು ಒಟ್ಟು ತಗಲಿರುವ ಮೊತ್ತವನ್ನು ಜಿಲ್ಲಾಧಿಕಾರಿಗಳ ಖಾತೆಯಿಂದ ಪಾವತಿಸಿ ನಂತರ ಮರು ಪಾವತಿಗಾಗಿ ಸರ್ಕಾರಕ್ಕೆ ಕಳುಹಿಸುವಂತೆ ಮೇಲೆ ಓದಲಾದ ಕ್ರಮ ಸಂ. (2)ರಲ್ಲಿ ನಿರ್ದೇಶಿಸಲಾಗಿದೆ. ಈ ಮಧ್ಯೆ ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಪತ್ರದಲ್ಲಿ ಸಹಾಯಕ ಕಾರ್ಯನಿರ್ವಾಹಕ (ವಿ), ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮ ನಿಯಮಿತ, ಮೈಸೂರು ಇವರು ನವೆಂಬರ್ 2010 ರಿಂದ ಎಪ್ರಿಲ್ 2011ರವರೆಗಿನ ವಿದ್ಯುತ್ ಬಿಲ್ಲಿನ ಬಾಕಿ ರೂ. 28,85,360.00ಗಳನ್ನು ಮರುಪಾವತಿಸುವಂತೆ ಕೋರಿ ಬಿಲ್ಲನ್ನು ಲಗತ್ತಿಸಿ ಕಳುಹಿಸಿರುತ್ತಾರೆ.

3. ಮೇಲೆ ಓದಲಾದ ಕ್ರಮ ಸಂಖ್ಯೆ (2)ರಲ್ಲಿನ ಪತ್ರದಲ್ಲಿ ಸೂಚಿಸಿರುವಂತೆ ಕ್ರಮ ಸಂ. (4)ರ ಪತ್ರದಲ್ಲಿ ಜಿಲ್ಲಾಧಿಕಾರಿಗಳು, ಮೈಸೂರು ಇವರು ವಿಮಾನ ನಿಲ್ದಾಣದ ವಿದ್ಯುತ್ ಬಿಲ್ಲನ್ನು ಅವರ ಹಂತದಲ್ಲಿ ಪರಶೀಲಿಸಿ ಪಾವತಿಸಲು ಹಣ ಬಿಡುಗಡೆ ಮಾಡಲು ಕೋರಿ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಮೂಅಇ 48 ರಾಅವಿ 2010 ಬೆಂಗಳೂರು, ದಿನಾಂಕ 20/05/2011**

ಮೈಸೂರು ವಿಮಾನ ನಿಲ್ದಾಣದಲ್ಲಿ ವಿಮಾನಯಾನ ಸೇವೆ ಕಾರ್ಯಾರಂಭಗೊಂಡ ದಿನಾಂಕದಿಂದ ವಿಮಾನ ನಿಲ್ದಾಣದ ವಿದ್ಯುತ್ ಬಳಕೆ ಬಿಲ್ಲನ್ನು 5 ವರ್ಷಗಳ ಅವಧಿಗೆ ಸರ್ಕಾರದಿಂದ ಭರಿಸಲು ತೀರ್ಮಾನಿಸಿರುವ ಹಿನ್ನಲೆಯಲ್ಲಿ ನವೆಂಬರ್ 2010 ರಿಂದ ಏಪ್ರಿಲ್ 2011 ರವರೆಗಿನ ವಿದ್ಯುತ್ ಬಿಲ್ಲಿನ ಬಾಕಿ ಮೊತ್ತ ರೂ. 28,85,360/–ಗಳನ್ನು ಜಿಲ್ಲಾಧಿಕಾರಿಗಳು, ಮೈಸೂರು ಇವರಿಗೆ ಬಿಡುಗಡೆ ಮಾಡಲು ಅನುಮತಿ ನೀಡಿದೆ.

2. ಈ ವಿಮಾನ ನಿಲ್ದಾಣದ ಪ್ರತಿ ತಿಂಗಳಿನ ವಿದ್ಯುತ್ ಬಳಕೆ ಬಿಲ್ಲನ್ನು ಜಿಲ್ಲಾಧಿಕಾರಿಗಳು ಪರಿಶೀಲಿಸಿ ಖಚಿತಪಡಿಸಿಕೊಂಡು ಪಾವತಿಸಬಹುದಾದ ಬಿಲ್ಲಿನ ಮೊತ್ತವನ್ನು ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮಕ್ಕೆ ಪಾವತಿಸಲು ಸರ್ಕಾರದ ಮಂಜೂರಾತಿಯನ್ನು ನೀಡಿದೆ.

3. ಸದರಿ ಮೊತ್ತವನ್ನು 2011–12ನೇ ಸಾಲಿನ ಲೆಕ್ಕ ಶೀರ್ಷಿಕೆ 5465–01–190–1–05–ಸಣ್ಣ ವಿಮಾನ ನಿಲ್ದಾಣಗಳ ಅಭಿವೃದ್ಧಿ–211–ಬಂಡವಾಳ ಹೂಡಿಕೆ (ಯೋಜನೆ)–ಯಡಿಯಲ್ಲಿ ಭರಿಸುವುದು.

4. ಈ ಹಣವನ್ನು ಜಿಲ್ಲಾಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು, ಇವರು ಪೇಯೀಸ್ ರಸೀದಿ ಮೂಲಕ ಸರ್ಕಾರದ ಅಧೀನ ಕಾರ್ಯದರ್ಶಿ, ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ, ಇವರ ಮೇಲು ರುಜುವಿನೊಂದಿಗೆ ರಾಜ್ಯ ಹುಜೂರು ಖಜಾನೆ, ಬೆಂಗಳೂರು, ಇಲ್ಲಿ ತೆಗೆಯಲು ಅನುಮತಿಸಿದೆ. ಜಲ್ಲಾಧಿಕಾರಿಗಳು, ಮೈಸೂರು ಇವರು ಈ ಮೊತ್ತವನ್ನು ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮ ನಿಯಮಿತ, ಮೈಸೂರು ಇಲ್ಲಿ ಪಾವತಿಸಿ ಉಪಯೋಗಿತ ಪ್ರಮಾಣ ಪತ್ರವನ್ನು ಕಳುಹಿಸಿಕೊಡುವುದು.

5. ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ: ಆಇ 1 ಟಿಎಫ್‌ಪಿ 2008 ದಿನಾಂಕ: 16/05/2008 ರಲ್ಲಿ ಸರ್ಕಾರದ ಪ್ರಧಾನ ಕಾರ್ಯದರ್ಶಿ/ಕಾರ್ಯದರ್ಶಿಗಳಿಗೆ ನೀಡಿದ ಆರ್ಥಿಕ ಪ್ರತ್ಯಾಯೋಜನೆಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಸಿ.ಎ. ಬಾಜುರವೀಂದ್ರನಾಥ್ ಪಟೇಲ್**
ಸರ್ಕಾರದ ಅಧೀನ ಕಾರ್ಯದರ್ಶಿ
ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ

ಪಿ.ಆರ್. 1361

## ಕಂದಾಯ ಸಚಿವಾಲಯ

**ವಿಷಯ :** ಶ್ರೀ ಹೆಚ್. ನಂಜಯ್ಯ, ತಹಶೀಲ್ದಾರ್ ಇವರ ಅಮಾನತ್ತನ್ನು ತೆರವು ಗೊಳಿಸಿ ಸೇವೆಗೆ ಪುನರ್ ಸ್ಥಾಪಿಸಿ ಸ್ಥಳ ನಿಯುಕ್ತಿಗೊಳಿಸುವ ಬಗ್ಗೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 43 ಎಡಿಇ 2010 ಬೆಂಗಳೂರು, ದಿನಾಂಕ 13/05/2011**

ಸರ್ಕಾರದ ಸಮಸಂಖ್ಯೆಯ ದಿನಾಂಕ: 09/08/2010ರ ಆದೇಶದ ಪ್ರಕಾರ ಅಮಾನತ್ತಿನಲ್ಲಿರುವ ಶ್ರೀ ಹೆಚ್. ನಂಜಯ್ಯ, ತಹಶೀಲ್ದಾರ್ ಇವರ ವಿರುದ್ಧ ಕ್ರಿಮಿನಲ್ ಮೊಕದ್ದಮೆ ಬಾಕಿ ಇಟ್ಟು, ಈ ಕೂಡಲೇ ಇವರ ಅಮಾನತ್ತು ತೆರವುಗೊಳಿಸಿ ಇವರನ್ನು ಖಾಲಿ ಇರುವ ಶಿಷ್ಟಾಚಾರ ತಹಶೀಲ್ದಾರ್, ಧಾರವಾಡ ಇಲ್ಲಿಗೆ ಈ ಕೂಡಲೇ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆಗೆ ಸ್ಥಳ ನಿಯುಕ್ತಿಗೊಳಿಸಿ ಸರ್ಕಾರವು ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
ಎಸ್. ಬಾಲಕೃಷ್ಣಯ್ಯ
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (ಸೇವೆಗಳು–3)

ಪಿ.ಆರ್. 1362

## ಕಂದಾಯ ಸಚಿವಾಲಯ

**ವಿಷಯ :** ಆಸರೆ ಯೋಜನೆಯಡಿಯಲ್ಲಿ ಮನೆ ನಿರ್ಮಾಣಕ್ಕಾಗಿ ವಿದ್ಯುಚ್ಛಕ್ತಿ ವ್ಯತ್ಯಯ ಉಂಟಾದ ಗ್ರಾಮಗಳಲ್ಲಿ ಡೀಸೆಲ್ ಜನರೇಟರನ್ನು ಬಾಡಿಗೆ ಮತ್ತು ಇಂಧನ ವೆಚ್ಚ ಪಾವತಿಸುವ ಬಗ್ಗೆ.

**ಓದಲಾಗಿದೆ :** ಕೊಪ್ಪಳ ಜಿಲ್ಲಾಧಿಕಾರಿಗಳ ಪತ್ರ ಸಂ:ಕಂನೈವಿ: ಆಸರೆ: 94/2010-11, ದಿನಾಂಕ: 11/03/2011.

**ಪ್ರಸ್ತಾವನೆ:**

ಮೇಲೆ ಓದಲಾದ ಕೊಪ್ಪಳ ಜಿಲ್ಲಾಧಿಕಾರಿಗಳ ಪತ್ರದಲ್ಲಿ ಆಸರೆ ಯೋಜನೆಯಡಿಯಲ್ಲಿ ಮನೆ ನಿರ್ಮಾಣಕ್ಕಾಗಿ ವಿದ್ಯುಚ್ಛಕ್ತಿ ವ್ಯತ್ಯಯ ಉಂಟಾದ ಗ್ರಾಮಗಳಲ್ಲಿ ಡೀಸೆಲ್ ಜನರೇಟರ್‌ನ್ನು ಬಾಡಿಗೆ ಮತ್ತು ಇಂಧನ ವೆಚ್ಚ ಪಾವತಿಸಲು ರೂ. 13.75ಲಕ್ಷ ಗಳನ್ನು ಬಿಡುಗಡೆ ಮಾಡುವಂತೆ ಕೊಪ್ಪಳ ಜಿಲ್ಲಾಧಿಕಾರಿಗಳು ಕೋರಿರುತ್ತಾರೆ. ಈ ಹಿನ್ನಲೆಯಲ್ಲಿ, ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 400 ಟಿಎನ್‌ಆರ್ 2010, ಬೆಂಗಳೂರು, ದಿನಾಂಕ: 16/05/2011.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಸಂದರ್ಭದ ಹಿನ್ನೆಲೆಯಲ್ಲಿ ಆಸರೆ ಯೋಜನೆಯಡಿಯಲ್ಲಿ ಮನೆಗಳ ನಿರ್ಮಾಣಕ್ಕಾಗಿ ಡೀಸೆಲ್ ಜನರೇಟರ್‌ನ್ನು ಬಾಡಿಗೆ ಆಧಾರದ ಮೇಲೆ ಪಡೆದ ಬಾಬ್ತು ಮತ್ತು ಇಂಧನ ವೆಚ್ಚ ಒಟ್ಟು ರೂ. 13.75ಲಕ್ಷ (ರೂಪಾಯಿ ಹದಿಮೂರು ಲಕ್ಷದ ಎಪತ್ತೈದು ಸಾವಿರ ಮಾತ್ರ) ಗಳನ್ನು ಜಿಲ್ಲಾಧಿಕಾರಿಗಳು, ಕೊಪ್ಪಳ ಜಿಲ್ಲೆ, ಕೊಪ್ಪಳ ಇವರಿಗೆ ಬಿಡುಗಡೆ ಮಾಡಲು ಮಂಜೂರಾತಿ ನೀಡಿದೆ.

ಈ ವೆಚ್ಚವನ್ನು ಲೆಕ್ಕ ಶೀರ್ಷಿಕೆ 8235-00-111-0-02 **Public Contributions to the Calamity Relief** ಅಡಿಯಲ್ಲಿ ಭರಿಸತಕ್ಕದ್ದು.

ಮೇಲಿನಂತೆ ಬಿಡುಗಡೆ ಮಾಡಿರುವ ಮೊತ್ತವನ್ನು ಜಿಲ್ಲಾಧಿಕಾರಿಗಳು ಸದರಿ ಲೆಕ್ಕ ಶೀರ್ಷಿಕೆ ಅಡಿಯಲ್ಲಿ ಡ್ರಾ ಮಾಡಲು ಪೇಯೀಸ್ ರಸೀದಿ (ಸಿಟಿಎಸ್-8) ಬಿಲ್ಲು ತಯಾರಿಸಿ, ಮೇಲು ಸಹಿ ಮಾಡಿ ಖಜಾನೆಗೆ ಸಲ್ಲಿಸಲು ಸೂಚಿಸಿದೆ.

ಈಗ ಬಿಡುಗಡೆ ಮಾಡುತ್ತಿರುವ ಅನುದಾನಕ್ಕೆ ಹಣ ಬಳಕೆ ಪತ್ರವನ್ನು ವೆಚ್ಚದ ವಿವರಗಳೊಂದಿಗೆ ಸಲ್ಲಿಸುವುದು. ಬಿಡುಗಡೆ ಮಾಡಿರುವ ಹಣವನ್ನು ಹೇಗೆ ಉಪಯೋಗಿಸಲಾಗಿದೆ ಮತ್ತು ಭೌತಿಕ ಹಾಗೂ ಆರ್ಥಿಕ ಪ್ರಗತಿಯ ವಿವರಗಳನ್ನು ಸಹ ಸಲ್ಲಿಸುವುದು.

ಈ ಮೊತ್ತವನ್ನು ಯಾವ ಉದ್ದೇಶಕ್ಕಾಗಿ ಬಿಡುಗಡೆ ಮಾಡಲಾಗಿದೆಯೋ ಅದೇ ಉದೇಶಕ್ಕೆ ಉಪಯೋಗಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
ಎಸ್. ಬಾಲಕೃಷ್ಣಯ್ಯ
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (ವಿ.ನಿ & ಸೇವೆಗಳು-2)

ಪಿ.ಆರ್. 1363

## ಕಂದಾಯ ಸಚಿವಾಲಯ

**ವಿಷಯ :** ಬೆಂಗಳೂರು ದಕ್ಷಿಣ ತಾಲ್ಲೂಕು, ಕೆಂಗೇರಿ ಹೋಬಳಿ, ರಿ.ಸ.ನಂ. 69 ರಲ್ಲಿನ 1.35 ಎಕರೆ ಜಮೀನನ್ನು ಶ್ರೀ ನಿರ್ಮಲಾನಂದ ಟ್ರಸ್ಟ್ ಇವರಿಗೆ 30 ವರ್ಷಗಳ ಅವಧಿಗೆ ಗುತ್ತಿಗೆ ಆಧಾರದ ಮೇಲೆ ಮಂಜೂರು ಮಾಡುವ ಬಗ್ಗೆ.

**ಓದಲಾಗಿ:**
1. ಶ್ರೀ ನಿರ್ಮಲಾನಂದಾಶ್ರಮ ಟ್ರಸ್ಟ್ (ರಿ) ಇವರ ಪತ್ರದ ದಿನಾಂಕ: 05/09/2008.
2. ವಿಶೇಷ ಜಿಲ್ಲಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ ಇವರ ಪತ್ರ ಸಂಖ್ಯೆ: ಎಲ್‌ಎನ್‌ಡಿ (ಎಸ್) ಸಿಆರ್ 301/08-09, ದಿನಾಂಕ: 30/04/2009 ಮತ್ತು 25/09/2009.
3. ಸರ್ಕಾರದ ಕಾರ್ಯದರ್ಶಿ, ಕಂದಾಯ ಇಲಾಖೆ ಮತ್ತು ಪದನಿಮಿತ್ತ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಸಾರ್ವಜನಿಕ ಜಮೀನುಗಳ ನಿಗಮ ನಿಯಮಿತ ಇವರ ಪತ್ರ ಸಂಖ್ಯೆ: ಟಿಎಫ್/10-11, ದಿನಾಂಕ: 26/07/2010.

**ಪ್ರಸ್ತಾವನೆ:**

ಶ್ರೀ ನಿರ್ಮಲಾನಂದ ಟ್ರಸ್ಟ್ (ರಿ) ಇವರು ಮೇಲೆ ಓದಲಾದ ಕ್ರಮ ಸಂಖ್ಯೆ: (1)ರ ದಿನಾಂಕ: 05/09/2008ರ ಮನವಿಯಲ್ಲಿ ಬೆಂಗಳೂರು ದಕ್ಷಿಣ ತಾಲ್ಲೂಕು, ಕೆಂಗೇರಿ ಹೋಬಳಿ, ಕೆಂಗೇರಿ ಗ್ರಾಮದ ರಿ.ಸ.ನಂ. 69ರಲ್ಲಿನ 1.35 ಎಕರೆ ಜಮೀನನ್ನು 30 ವರ್ಷಗಳ ಅವಧಿಗೆ ಗುತ್ತಿಗೆ ಆಧಾರದ ಮೇಲೆ ಮಂಜೂರು ಮಾಡಲು ಕೋರಿರುತ್ತಾರೆ. ಸದರಿ ಟ್ರಸ್ಟ್‌ನವರು ಈ ಜಮೀನಿನಲ್ಲಿ ಕಳೆದ 22 ವರ್ಷಗಳಿಂದ ಸ್ವಾಧೀನದಲ್ಲಿದ್ದು, ಸುಮಾರು ರೂ. 1.5 ಕೋಟಿಗಳಷ್ಟು ಖರ್ಚು ಮಾಡಿ ಈ ಜಮೀನಿನಲ್ಲಿ ಸಂಸ್ಕೃತ, ಸಂಗೀತ ಶಾಲೆ, ಯೋಗ ತರಗತಿಗಳನ್ನು ನಡೆಸುತ್ತಿದ್ದು, ಉಚಿತ ಹಾಸ್ಟೆಲ್, ಅನಾಥಾಶ್ರಮ ವೃದ್ಧಾಶ್ರಮ ಇತ್ಯಾದಿಗಳನ್ನು ನಿರ್ಮಿಸಿ ಇನ್ನು ಹೆಚ್ಚಿನ ಸಮಾಜ ಸೇವೆಯನ್ನು ನಡೆಸುವ ಸಲುವಾಗಿ ಈ ಜಮೀನನ್ನು ಮಂಜೂರು ಮಾಡುವಂತೆ ಕೋರಿರುತ್ತಾರೆ.

2. ವಿಶೇಷ ಜಿಲ್ಲಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ ಇವರು ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ದಿನಾಂಕ: 30/04/2009 ಮತ್ತು 25/09/2009ರ ಪತ್ರಗಳಲ್ಲಿ ಸರ್ಕಾರಕ್ಕೆ ವರದಿಯನ್ನು ಸಲ್ಲಿಸಿ, ಬೆಂಗಳೂರು ದಕ್ಷಿಣ ತಾಲ್ಲೂಕು, ಕೆಂಗೇರಿ ಹೋಬಳಿ, ಕೆಂಗೇರಿ ಗ್ರಾಮದ ಸ.ನಂ. 69ರಲ್ಲಿ ಒಟ್ಟು 111.03 ಎಕರೆ ಜಮೀನಿದ್ದು, ಸರ್ಕಾರಿ ಮುಫತ್ ಕಾವಲ್ ಎಂದು ವರ್ಗೀಕೃತವಾಗಿರುವುದಾಗಿ ತಿಳಿಸಿರುತ್ತಾರೆ. ಈ ಪೈಕಿ ಈಗಾಗಲೇ ಹಲವು ಸಂಘ ಸಂಸ್ಥೆಗಳಿಗೆ ಗುತ್ತಿಗೆ ಆಧಾರದ ಮೇಲೆ ಹಾಗೂ ದರಖಾಸ್ತಿನಲ್ಲಿ ಕೆಲವರಿಗೆ ಮಂಜೂರು ಮಾಡಿರುವುದಾಗಿ ತಿಳಿಸುತ್ತಾ, ಸದರಿ ಜಮೀನು ಗೋಮಾಳಕ್ಕೆ ಸೂಕ್ತವಾದ ಜಮೀನಾಗಿರುವುದಿಲ್ಲ ಮತ್ತು ಇದು ಕಲ್ಲುಬಂಡೆ ಮತ್ತು ಸಣ್ಣ ಗುಡ್ಡಗಳಿಂದ ಕೂಡಿದೆ ಎಂದು ವರದಿ ಮಾಡಿರುತ್ತಾರೆ. ಸದರಿ ಜಮೀನಿನ ಮಾರ್ಗಸೂಚಿ ಬೆಲೆ ರೂ. 50 ಲಕ್ಷಗಳು ಮತ್ತು ಪ್ರಚಲಿತ ಮಾರುಕಟ್ಟೆ ಬೆಲೆಯು ರೂ.1 ಕೋಟಿ ಇರುತ್ತದೆ ಹಾಗೂ ಇದು ನಗರ ವ್ಯಾಪ್ತಿಯಲ್ಲಿ ಬರುತ್ತದೆ ಎಂದು ವರದಿ ಮಾಡಿರುತ್ತಾರೆ. ಸದರಿ ಟ್ರಸ್ಟ್ 2002ರಲ್ಲಿ ನೋಂದಣಿಯಾಗಿದ್ದು, ಸದರಿ ಸಂಸ್ಥೆಯ ಆರ್ಥಿಕ ಪ್ರಗತಿ ಪರಿಶೀಲನೆ ಆಡಿಟ್ ವರದಿಗಳನ್ನು

ಸಲ್ಲಿಸಿರುತ್ತಾರೆ. ಸ್ಥಳೀಯ ಗ್ರಾಮಸ್ಥರು ಈ ಜಮೀನನ್ನು ಸದರಿ ಸಂಸ್ಥೆಗೆ ಸಮಾಜ ಸೇವೆ ನಡೆಸಲು ನೀಡುವ ಬಗ್ಗೆ ಯಾವುದೇ ವಿರೋಧವಿರುವುದಿಲ್ಲವೆಂದು ತಿಳಿಸಿರುವುದಾಗಿ ವರದಿ ಮಾಡಿರುತ್ತಾರೆ.

3. ಈ ಬಗ್ಗೆ ಸರ್ಕಾರದ ಕಾರ್ಯದರ್ಶಿ, ಕಂದಾಯ ಇಲಾಖೆ ಮತ್ತು ಪದನಿಮಿತ್ತ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಸಾರ್ವಜನಿಕ ಜಮೀನುಗಳ ನಿಗಮ ನಿಯಮಿತ ಇವರು ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ದಿನಾಂಕ 26/07/2010ರ ಪತ್ರದಲ್ಲಿ ಈ ಬಗ್ಗೆ ವರದಿಯನ್ನು ಸಲ್ಲಿಸಿ ಬೆಂಗಳೂರು ದಕ್ಷಿಣ ತಾಲ್ಲೂಕು, ಕೆಂಗೇರಿ ಹೋಬಳಿ, ಕೆಂಗೇರಿ ಗ್ರಾಮದ ಸ.ನಂ. 69 ರಲ್ಲಿರುವ 1.35 ಎಕರೆ ಸರ್ಕಾರಿ ಜಮೀನನ್ನು ಮಂಜೂರು ಮಾಡುವ ಬಗ್ಗೆ ಜಿಲ್ಲಾಧಿಕಾರಿಗಳು ಮಾಡಿರುವ ಶಿಫಾರಸ್ಸಿನಂತೆ, ಆರ್ಥಿಕ ಇಲಾಖೆಯು ನೀಡಿರುವ ಸಹಮತಿಯಂತೆ ಶ್ರೀ ನಿರ್ಮಾಲಾನಂದ ಟ್ರಸ್ಟ್‌ಗೆ 30 ವರ್ಷಗಳ ಗುತ್ತಿಗೆ ಆಧಾರದ ಮೇಲೆ ಮಂಜೂರು ಮಾಡುವ ಪ್ರಸ್ತಾವನೆಯನ್ನು ಪರಿಗಣಿಸಬಹುದಾಗಿದೆ ಎಂದು ತಿಳಿಸಿರುತ್ತಾರೆ.

4. ಸರ್ಕಾರಿ ಜಮೀನುಗಳು ಅತ್ಯಂತ ಬೆಲೆ ಬಾಳುವ ಮತ್ತು ಅತ್ಯಂತ ವಿರಳವಾದ ನೈಸರ್ಗಿಕ ಸಂಪತ್ತು ಆಗಿದ್ದು, ಈ ಜಮೀನುಗಳನ್ನು ಮುಂದಿನ ಪೀಳಿಗೆಗೆ ಕಾಯ್ದಿರಿಸುವ ಅಗತ್ಯತೆಯನ್ನು ಮನಗಂಡು, ಗುತ್ತಿಗೆ ಆಧಾರದ ಮೇಲೆ ಮಂಜೂರು ಮಾಡಿದಲ್ಲಿ ಸರ್ಕಾರದ ಜಮೀನುಗಳನ್ನು ಶಾಶ್ವತವಾಗಿ ಪರಭಾರೆ ಆಗದೆ ಗುತ್ತಿಗೆ ಅವಧಿ ಮುಗಿದ ನಂತರ ಸರ್ಕಾರದಲ್ಲಿಯೇ ಉಳಿಯುತ್ತವೆ ಎಂಬ ಮುಂದಾಲೋಚನೆಯಿಂದ ಇಂತಹ ಪ್ರಸ್ತಾವನೆಗಳಿಗೆ ನಿಯಮಾನುಸಾರ ಗುತ್ತಿಗೆ ಆಧಾರದ ಮೇಲೆ ಜಮೀನು ಮಂಜೂರು ಮಾಡಲು ಉದ್ದೇಶಿಸಿದೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 708 ಎಲ್‌ಜಿಬಿ 2008, ಬೆಂಗಳೂರು, ದಿನಾಂಕ: 18/05/2011.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಬೆಂಗಳೂರು ದಕ್ಷಿಣ ತಾಲ್ಲೂಕು, ಕೆಂಗೇರಿ ಹೋಬಳಿ, ಕೆಂಗೇರಿ ಗ್ರಾಮದ ಸ.ನಂ. 69ರಲ್ಲಿನ 1.35 ಎಕರೆ ಜಮೀನನ್ನು ಶ್ರೀ ನಿರ್ಮಾಲಾನಂದ ಟ್ರಸ್ಟ್ ಇವರಿಗೆ ಅನಾಥಾಶ್ರಮ, ವೃದ್ಧಾಶ್ರಮ, ಉಚಿತ ಆರೋಗ್ಯ ಸೇವೆ, ಗೋಶಾಲೆ ಇತ್ಯಾದಿಗಳನ್ನು ನಡೆಸುವ ಉದ್ದೇಶಕ್ಕಾಗಿ ಕರ್ನಾಟಕ ಭೂ ಮಂಜೂರಾತಿ ನಿಯಮಗಳು 1969ರ ನಿಯಮ 19(1)(ಎ) ಮತ್ತು 19(3)(ಬಿ) ರನ್ವಯ 30 ವರ್ಷಗಳ ಅವಧಿಗೆ ವಾರ್ಷಿಕ ಗುತ್ತಿಗೆ ದರವನ್ನು ಪ್ರಚಲಿತ ಮಾರ್ಗಸೂಚಿ ದರದ ಶೇ 10 ರಷ್ಟು ವಿಧಿಸಿ, ಸದರಿ ಗುತ್ತಿಗೆ ದರವನ್ನು ಪ್ರತಿ ಎರಡು ವರ್ಷಗಳಿಗೊಮ್ಮೆ ಶೇ. 10ರಂತೆ ಹೆಚ್ಚಿಸುವ ಷರತ್ತು ವಿಧಿಸಿ ಮಂಜೂರು ಮಾಡಿ ಆದೇಶಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 352 ವೆಚ್ಚ–7/2010, ದಿನಾಂಕ 27/04/2010ರಲ್ಲಿ ನೀಡಿರುವ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
ಇ. ಈಶ್ವರ ನಾಯಕ್
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (ಭೂ.ಮಂ)

ಪಿ.ಆರ್. 1364

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಸಿ. ಕೃಷ್ಣಪ್ಪ, ಡಿವೈ.ಎಸ್.ಪಿ. ಇವರ ಅಮಾನತ್ತಿನ ಬಗ್ಗೆ

**ಓದಲಾಗಿ:**
1. ಸರ್ಕಾರದ ಆದೇಶ ಸಂಖ್ಯೆ: ಒಇ 299 ಪೊಸಿಪ 2008, ದಿನಾಂಕ: 18/11/2008.
2. ಸರ್ಕಾರದ ಆದೇಶ ಸಂಖ್ಯೆ: ಒಇ 299 ಪೊಸಿಪ 2008, ದಿನಾಂಕ: 22/06/2009.
3. ಸರ್ಕಾರದ ಅಧಿಸೂಚನೆ ಸಂಖ್ಯೆ: ಒಇ 299 ಪೊಸಿಪ 2008, ದಿನಾಂಕ: 05/08/2009.
4. ಡಿಜಿ ಮತ್ತು ಐಜಿಪಿ ರವರ ಆದೇಶ ಸಂಖ್ಯೆ: ಸಿಬಿ4/118/2009–10, ದಿನಾಂಕ: 30/07/2010.

**ಪ್ರಸ್ತಾವನೆ:**

ಶ್ರೀ ಸಿ. ಕೃಷ್ಣಪ್ಪ, ಡೆಪ್ಯೂಟಿ ಸೂಪರಿಂಟೆಂಡೆಂಟ್ ಆಫ್ ಪೊಲೀಸ್ (ಸಿವಿಲ್), ಅವರ ಆದಾಯಕ್ಕಿಂತ ಹೆಚ್ಚು ಅಕ್ರಮ ಆಸ್ತಿ ಹೊಂದಿರುವವರೆಂಬ ಆರೋಪಕ್ಕಾಗಿ, ಅವರ ವಿರುದ್ಧ ಮೈಸೂರು ಲೋಕಾಯುಕ್ತ ಪೊಲೀಸ್ ಠಾಣೆ ಮೊ.ಸಂ. 10/08ರಲ್ಲಿ ಪ್ರಕರಣವನ್ನು ದಾಖಲು ಮಾಡಿ, ದಿನಾಂಕ: 07/08/2008 ರಂದು ಲೊಕಾಯುಕ್ತ ಪೊಲೀಸರು ಅವರ ಮನೆಯ ಮೇಲೆ ಮತ್ತು ಇತರೆ ಕಡೆಗಳಲ್ಲಿ ದಾಳಿ ನಡೆಸಿದ್ದಿದರಿಂದ ಹಾಗೂ ಸದರಿಯವರು ಪ್ರಕರಣದಲ್ಲಿ ಹಸ್ತಕ್ಷೇಪ ಮಾಡುವ ಅಥವಾ ಸಾಕ್ಷಿ ಪುರಾವೆಗಳನ್ನು ನಾಶಪಡಿಸುವ ಸಾಧ್ಯತೆ ಇದ್ದುದರಿಂದ, ಅವರ ವಿರುದ್ಧ ಇಲಾಖಾ ವಿಚಾರಣೆಯನ್ನು ಬಾಕಿ ಉಳಿಸಿ, ತಕ್ಷಣದಿಂದ ಜಾರಿಗೆ ಬರುವಂತೆ ಮೇಲೆ ಓದಲಾದ (1)ರ ಆದೇಶದಲ್ಲಿ ಸದರಿ ಅಧಿಕಾರಿಯವರನ್ನು ಸೇವೆಯಿಂದ ಅಮಾನತ್ತಿನಲ್ಲಿರಿಸಿದ್ದು, ಅವರ ಲೀನ್ ಚಿತ್ರದುರ್ಗ ಡಿ.ಸಿ.ಆರ್.ಬಿ. ಡಿವೈ.ಎಸ್.ಪಿ. ಹುದ್ದೆಗೆ ನಮೂದಿಸಲಾಗಿತ್ತು. ತದನಂತರ ಮೇಲೆ ಓದಲಾದ (2)ರ ಆದೇಶದಲ್ಲಿ ಶ್ರೀ ಸಿ. ಕೃಷ್ಣಪ್ಪ, ಡಿವೈ.ಎಸ್.ಪಿ. (ಅಮಾನತ್ತು) ಇವರ ಲೀನ್ ಅನ್ನು ಡಿವೈ.ಎಸ್.ಪಿ. ಡಿ.ಸಿ.ಆರ್.ಬಿ. ಚಿತ್ರದುರ್ಗ ಹುದ್ದೆಯಿಂದ ಡಿ.ಸಿ.ಆರ್.ಬಿ ಬಿಜಾಪುರ ಹುದ್ದೆಗೆ ಬದಲಾಯಿಸಿ ಆದೇಶಿಸಲಾಗಿದೆ. ಮೇಲೆ ಓದಲಾದ (3)ರ ಅಧಿಸೂಚನೆಯಲ್ಲಿ ಇವರ ವಿರುದ್ಧದ ಲೋಕಾಯುಕ್ತ ಪೊಲೀಸ್ ಠಾಣೆ ಮೊಕದ್ದಮೆ ಸಂಖ್ಯೆ: 10/08ನ್ನು ಬಾಕಿ ಇರಿಸಿ ಅಮಾನತ್ತನ್ನು ತೆರವುಗೊಳಿಸಿ, ಡಿವೈ.ಎಸ್.ಪಿ.ಸಿ.ಸಿ.ಬಿ. ಮೈಸೂರು ಇಲ್ಲಿಗೆ ಸ್ಥಳನಿಯುಕ್ತಿಗೊಳಿಸಲಾಗಿದೆ. ಈ ವರ್ಗಾವಣೆಯ ವಿರುದ್ಧ ಶ್ರೀ ಎಂ. ನಾಗರಾಜ್, ಡಿವೈ.ಎಸ್.ಪಿ. ಸಿ.ಸಿ.ಬಿ. ಮೈಸೂರು ಇವರು ಕೆ.ಎ.ಟಿ. ಯಲ್ಲಿ ಅರ್ಜಿ ಸಂಖ್ಯೆ: 3439/2009 ಸಲ್ಲಿಸಿದ್ದು, ದಿನಾಂಕ: 07/08/2009 ರಲ್ಲಿ ಮಾನ್ಯ ಕೆ.ಎ.ಟಿ.ಯು ವರ್ಗಾವಣೆಗೆ ತಡೆಯಾಜ್ಞೆ ನೀಡಿದ ಹಿನ್ನೆಲೆಯಲ್ಲಿ ಡಿಜಿ ಮತ್ತು ಐಜಿಪಿ ರವರ ಮೇಲೆ ಓದಲಾದ (4)ರ ಆದೇಶದಲ್ಲಿ ಶ್ರೀ ಸಿ. ಕೃಷ್ಣಪ್ಪ ಡಿವೈ.ಎಸ್.ಪಿ. ರವರನ್ನು ಐ.ಜಿ.ಪಿ. ದಕ್ಷಿಣ ವಲಯ, ಮೈಸೂರು ಇವರ ಕಛೇರಿಯಲ್ಲಿನ ಡಿವೈ.ಎಸ್.ಪಿ. ಖಾಲಿ ಹುದ್ದೆಗೆ ಸ್ಥಳನಿಯುಕ್ತಿಗೊಳಿಸಲಾಗಿದೆ.

ಶ್ರೀ ಸಿ. ಕೃಷ್ಣಪ್ಪ ರವರು ಕೆ.ಎ.ಟಿ.ಯಲ್ಲಿ ಅರ್ಜಿ ಸಂಖ್ಯೆ: 1975/2009 ಸಲ್ಲಿಸಿದ್ದು, ಕೆ.ಎ.ಟಿ.ಯು ಕೆಳಕಂಡಂತೆ ಆದೇಶಿಸಿದೆ.

"XXXXXXXX......

8. For the aforesaid reasons, this application is allowed and the suspension of the applicant made in the order No.OE.299.Pocipa.2008 dated: 18/11/2008 (Annexure.A1) is hereby quashed, keeping liberty to the Government, if it so desires, to pass a fresh order after complying with requirement of Rule 10(3) of the KCS(CCA) Rules".

ಪೋಲೀಸ್ ಅಧಿಕಾರಿ/ಸಿಬ್ಬಂದಿಗೆ ಸಂಬಂಧಿಸಿದಂತೆ ಶಿಸ್ತು ಕ್ರಮವನ್ನು ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು, 1965 ರನ್ವಯ ಪರಿಶೀಲಿಸಲಾಗುತ್ತದೆ. ಪ್ರಸ್ತಾಪಿತ ಪ್ರಕರಣವನ್ನು ವಿವರವಾಗಿ ಪರಿಶೀಲಿಸಿ ದಿನಾಂಕ: 18–11–2008ರ ಸರ್ಕಾರಿ ಆದೇಶದಲ್ಲಿ ಅಮಾನತ್ತು ಆದೇಶವನ್ನು ಹೊರಡಿಸಲಾಗಿದೆ. ಆದಾಗ್ಯೂ ಕೆ.ಎ.ಟಿ.ಯ ಆದೇಶದ ಹಿನ್ನೆಲೆಯಲ್ಲಿ ಈ ಪ್ರಕರಣವನ್ನು ಪುನರ್ ಪರಿಶೀಲಿಸಲಾಗಿದೆ. ಎ.ಡಿ.ಜಿ.ಪಿ. ಕರ್ನಾಟಕ ಲೋಕಾಯುಕ್ತ ಇವರು ತಮ್ಮ ದಿನಾಂಕ: 16/08/2008ರ ಪ್ರಸ್ತಾವನೆಯೊಡನೆ ವಿಶೇಷ ವರದಿ, ಪ್ರಥಮ ವರ್ತಮಾನ ವರದಿ, ಸೋರ್ಸ್ ವರದಿ ಹಾಗೂ ಪಂಚನಾಮೆ ವರದಿಗಳ ಪ್ರತಿಗಳನ್ನು ನೀಡಿದ್ದು, ಈ ದಾಖಲೆಗಳನ್ನು ವಿವರವಾಗಿ ಪರಿಶೀಲಿಸಲಾಗಿ ಶ್ರೀ ಸಿ.ಕೃಷ್ಣಪ್ಪ ಇವರು ತಮ್ಮ ಆದಾಯಕ್ಕಿಂತ ಹೆಚ್ಚಿನ ಆಸ್ತಿಯನ್ನು ಹೊಂದಿರುವುದು ಮೇಲ್ನೋಟಕ್ಕೆ ಸರ್ಕಾರಕ್ಕೆ ಮನವರಿಕೆಯಾಗಿದೆ. ಅದರಂತೆ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ ಒಇ 299 ಪೊಸಿಪ 2008 ಬೆಂಗಳೂರು, ದಿನಾಂಕ: 16/05/2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಅಮಾನತ್ತುಗೊಳಿಸಿ ಹೊರಡಿಸಿದ್ದ ದಿನಾಂಕ: 18/11/2008ರ ಆದೇಶವು ಕೆ.ಎ.ಟಿ. ಆದೇಶದನ್ವಯ ರದ್ದುಗೊಂಡಿರುವುದರಿಂದ, ಇವರು ಅಮಾನತ್ತಿನಲ್ಲಿದ್ದ ಅವಧಿ ದಿನಾಂಕ: 18/11/2008 ರಿಂದ 21/09/2009 ರವರೆಗಿನ ಅವಧಿಯನ್ನು ಅಮಾನತ್ತೆಂದೇ ಪುನರ್ ಪರಿಗಣಿಸಿ ಆದೇಶಿಸಲಾಗಿದೆ (Deemed to have been under suspension from 18/11/2008 to 21/09/2009).

ಉಲ್ಲೇಖದಲ್ಲಿನ ಆದೇಶಗಳಲ್ಲಿ ಈಗಾಗಲೇ ಇವರ ಲೀನ್ ಅನ್ನು ಡಿವೈ.ಎಸ್.ಪಿ.ಡಿ.ಸಿ.ಆರ್.ಬಿ. ಚಿತ್ರದುರ್ಗ ಮತ್ತು ಡಿವೈ.ಎಸ್.ಪಿ, ಡಿ.ಸಿ.ಆರ್.ಬಿ. ಬಿಜಾಪುರ ಹುದ್ದೆಗಳಿಗೆ ನೀಡಿದ್ದು ಇದನ್ನು ಪರಿಗಣಿಸಿ ಇವರ ಜೀವನಾಧಾರ ಭತ್ಯೆ ಬಿಡುಗಡೆ ಮಾಡುವುದು. ಆಡಳಿತಾತ್ಮಕ ಅಡಚಣೆಗಳಿದ್ದಲ್ಲಿ ಈ ಅವಧಿಯಲ್ಲಿನ ಲೀನ್ ಅನ್ನು ಖಾಲಿ ಇರುವ ಈ ಕೆಳಕಂಡ ಡಿವೈ.ಎಸ್.ಪಿ. ಹುದ್ದೆಗಳಲ್ಲಿ ಪರಿಗಣಿಸಿ, ಪ್ರಸ್ತಾಪಿತ ಅಮಾನತ್ತಿನ ಅವಧಿಗೆ ಜೀವನಾಧಾರ ಭತ್ಯೆಯನ್ನು ಕೂಡಲೇ ಬಿಡುಗಡೆ ಮಾಡಲು ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು ಇವರಿಗೆ ಆದೇಶಿಸಿದೆ.

| ಕ್ರಮ ಸಂಖ್ಯೆ | ಅವಧಿ | ಹುದ್ದೆ |
|---|---|---|
| 1. | 18/11/2008 ರಿಂದ 31/12/2008 | ಡಿವೈ.ಎಸ್.ಪಿ.ಸಿ.ಐ.ಡಿ, ಬೆಂಗಳೂರು |
| 2. | 01/01/2009 ರಿಂದ 30/04/2009 | ಡಿವೈ.ಎಸ್.ಪಿ, ರಾಜ್ಯ ಗುಪ್ತವಾರ್ತೆ, ಬೆಂಗಳೂರು |
| 3. | 01/05/2009 ರಿಂದ 21/09/2009 | ಡಿವೈ.ಎಸ್.ಪಿ, ಆಂತರಿಕ ಭದ್ರತೆ, ಬೆಂಗಳೂರು. |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
ಟಿ. ಎನ್. ರವಿಪ್ರಕಾಶ್
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

ಪಿ.ಆರ್. 1365

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಎಸ್.ಎಂ. ಶಿವಕುಮಾರ, ಸಿ.ಪಿ.ಐ., ಜಗಳೂರು ವೃತ್ತ ದಾವಣಗೆರೆ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿ:**
1. ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧೀಕ್ಷಕರು, ದಾವಣಗೆರೆ ಇವರ ಆದೇಶ ಸಂಖ್ಯೆ: ಸಿಬ್ಬಂದಿ(5)/ಪಿಆರ್/112/2009 (ಓ.ಬಿ. 809/2009), ದಿನಾಂಕ: 31/07/2009.
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾನಿರೀಕ್ಷಕರು, ಪೂರ್ವ ವಲಯ, ದಾವಣಗೆರೆ, ಇವರ ಆದೇಶ ಸಂಖ್ಯೆ: 14/ಅಪೀಲು/ಸಿಬ್ಬಂದಿ–2/2009–10 (ಓ.ಬಿ. 199/2009–10), ದಿನಾಂಕ: 18/11/2009.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 26/04/2010.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಸಿಬಿ(8)/141/2009–10, ದಿನಾಂಕ: 26/08/2010.

**ಪ್ರಸ್ತಾವನೆ:**

ಶ್ರೀ ಎಸ್.ಎಂ. ಶಿವಕುಮಾರ, ಸಿ.ಪಿ.ಐ., ಜಗಳೂರು ವೃತ್ತ ದಾವಣಗೆರೆ ಇವರು (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯದಲ್ಲಿ ಅತೀವ ನಿರ್ಲಕ್ಷತನ ಹಾಗೂ ಘೋರ ಬೇಜವಾಬ್ದಾರಿತನ ಪ್ರದರ್ಶಿಸಿದ ಕಾರಣದ ಮೇಲೆ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 7 ರಡಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:**

"ಶ್ರೀ ಎಸ್.ಎಂ. ಶಿವಕುಮಾರ, ಸಿ.ಪಿ.ಐ., ಜಗಳೂರು ವೃತ್ತ ದಾವಣಗೆರೆ ಜಿಲ್ಲೆ, ಆದ ನಿಮಗೆ ಬಿಳಿಚೋಡು ಪೊಲೀಸ್ ಠಾಣೆ ಪರಿವೀಕ್ಷಣೆ ಸಂದರ್ಭದಲ್ಲಿ ಬಿಳಿಚೋಡು ಪೊಲೀಸ್ ಠಾಣೆ ಗುನ್ನೆ ನಂ: 97/2008 ಕಲಂ 395 ಐಪಿಸಿ (ಶ್ರೀ ರಂಗನಾಥ ದೇವಾಲಯ) ಕಳುವು ಪ್ರಕರಣದಲ್ಲಿ ದಾವಣಗೆರೆ ಗ್ರಾಮಾಂತರ ಪೊಲೀಸ್ ಠಾಣೆ ಗುನ್ನ ನಂ: 303/1997 ಕಲಂ 457, 380 ಐ.ಪಿ.ಸಿ. ಪ್ರಕರಣದಲ್ಲಿ ಭಾಗಿಯಾಗಿರುವ ಎಂ.ಓ. ಆಸಾಮಿಗಳಾದ

1. ಚದುರಗೊಳ್ಳ ಗ್ರಾಮದ ವಾಸಿ ಮೆಹಬೂಬು ಸುಭಾನಿ
2. ಚಂದ್ರ ಸೋಲ್ಲಾಪುರ ಗ್ರಾಮ
3. ದಾದಾಪೀರ್ ಭರಮಸಾಗರ
4. ಚಾಂದ್ ಭಾಷ, ಭರಮಸಾಗರ
5. ನೂರ್‌ಷಾ ತಾಮ್ರದಹಳ್ಳಿ ಇವರುಗಳನ್ನು ದೀರ್ಘವಿಚಾರಣೆ ಮಾಡಿ ಪ್ರಕರಣವನ್ನು ಪತ್ತೆ ಹಚ್ಚಿ ಪಾಲನಾ ವರದಿಯನ್ನು ಸಲ್ಲಿಸುವಂತೆ ನಿಮಗೆ 2 ಬಾರಿ ಈ ಕಛೇರಿಯಿಂದ ಜ್ಞಾಪನ ನೀಡಿದರೂ ಸಹ ನೀವು ಈ ಬಗ್ಗೆ ಯಾವುದೇ ಕ್ರಮ ಕೈಗೊಳ್ಳದೆ ನಿಮ್ಮ ಮೇಲಾಧಿಕಾರಿಗಳ ಆದೇಶಗಳನ್ನು

ಉಲ್ಲಂಘಿಸಿ ಮತ್ತು ಇಲಾಖೆಯ ಶಿಸ್ತನ್ನು ಉಲ್ಲಂಘಿಸಿ ನಿಮ್ಮ ಆದ್ಯ ಕರ್ತವ್ಯದಲ್ಲಿ ಅತೀವ ನಿರ್ಲಕ್ಷತನ ಹಾಗೂ ಘೋರ ಬೇಜವಾಬ್ದಾರಿತನವನ್ನು ಹಾಗೂ ಅತೀವ ಅಶಿಸ್ತನ್ನು ಪ್ರದರ್ಶಿಸಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತುಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ದಾವಣಗೆರೆ, ಇವರು ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ: 31/07/2009ರ ಆದೇಶದಲ್ಲಿ ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಗಳನ್ನು ತದನಂತರದ ವೇತನ ಬಡ್ತಿಗಳಿಗೆ ದಕ್ಕೆಯಾಗದಂತೆ ಮೂರು (03) ತಿಂಗಳ ಕಾಲ ಮುಂದೂಡಲಾಗಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾನಿರೀಕ್ಷಕರು, ಪೂರ್ವ ವಲಯ, ದಾವಣಗೆರೆ, ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 18/11/2009ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಸದರಿ ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಹೊಸ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವಾದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 71 ಪೊಸಿಅ 2010 ಬೆಂಗಳೂರು, ದಿನಾಂಕ: 21/05/2011.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎಸ್.ಎಂ. ಶಿವಕಮಾರ, ಸಿ.ಪಿ.ಐ., ಜಗಳೂರು ವೃತ್ತ ದಾವಣಗೆರೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
ಹೆಚ್.ಕೆ. ನಿಂಗಪ್ಪ
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು–ಬಿ)

ಪಿ.ಆರ್. 1366

## ಕಂದಾಯ ಸಚಿವಾಲಯ

**ವಿಷಯ :** ಬೆಂಗಳೂರು ದಕ್ಷಿಣ ತಾಲ್ಲೂಕು, ಬೇಗೂರು ಹೋಬಳಿ, ಸಿಂಗಸಂದ್ರ ಗ್ರಾಮದ ಸ.ನಂ. 24ರಲ್ಲಿ 27 ಗುಂಟೆ ಜಮೀನನ್ನು ಪಿಳೇಕಮ್ಮ ಮಹೇಶ್ವರ ದೇವಸ್ಥಾನ ಟ್ರಸ್ಟ್‌ಗೆ ಮಂಜೂರು ಮಾಡುವ ಬಗ್ಗೆ

**ಓದಲಾಗಿದೆ :**
1. ವಿಶೇಷ ಜಿಲ್ಲಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ ಇವರ ಪತ್ರ ಸಂಖ್ಯೆ: ಎಲ್‌ಎನ್‌ಡಿ (ಎಸ್) ಸಿಆರ್ 442/2008–09, ದಿನಾಂಕ 20–11–2008 ಮತ್ತು 15–09–2009.
2. ಕಾರ್ಯದರ್ಶಿ, ಭುವನೇಶ್ವರಿ ಸೇವಾ ಸಂಘ, ಬೆಂಗಳೂರು ಇವರ ಪತ್ರ ದಿನಾಂಕ 26–05–2009.

**ಪ್ರಸ್ತಾವನೆ :**

ವಿಶೇಷ ಜಿಲ್ಲಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ ಇವರು ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ದಿನಾಂಕ 20–11–2008ರ ಪತ್ರದಲ್ಲಿ ಬೆಂಗಳೂರು ದಕ್ಷಿಣ ತಾಲ್ಲೂಕು, ಬೇಗೂರು ಹೋಬಳಿ, ಸಿಂಗಸಂದ್ರ ಗ್ರಾಮದ ಸ.ನಂ. 24ರಲ್ಲಿ 0.27 ಗುಂಟೆ ಜಮೀನನ್ನು ಪಿಳೇಕಮ್ಮ ಮಹೇಶ್ವರ ದೇವಸ್ಥಾನ ಟ್ರಸ್ಟ್‌ಗೆ ಮಂಜೂರು ಮಾಡುವ ಬಗ್ಗೆ ಸರ್ಕಾರದ ಆದೇಶ ಕೋರಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

2. ಜಿಲ್ಲಾಧಿಕಾರಿಗಳ ವರದಿಯನ್ವಯ ಬೆಂಗಳೂರು ದಕ್ಷಿಣ ತಾಲ್ಲೂಕು, ಬೇಗೂರು ಹೋಬಳಿ, ಸಿಂಗಸಂದ್ರ ಗ್ರಾಮದ ಸ.ನಂ. 24ರಲ್ಲಿನ 27 ಗುಂಟೆ ಜಮೀನು ಅಂತನ ತೋಪು ಎಂದು ವರ್ಗೀಕರಣಗೊಂಡಿರುತ್ತದೆ. ಸದರಿ ಜಮೀನಿನಲ್ಲಿ ಪಿಳೇಕಮ್ಮ ದೇವಾಲಯ ಮತ್ತು ಚಿಕ್ಕ ತೋಟ ಇರುತ್ತದೆ. ಪಿಳೇಕಮ್ಮ ಮಹೇಶ್ವರ ದೇವಸ್ಥಾನ ಟ್ರಸ್ಟ್ ದಿನಾಂಕ 25–10–2008ರಂದು ನೋಂದಣಿಯಾಗಿದ್ದು, ದೇವಸ್ಥಾನವನ್ನು ಅಭಿವೃದ್ಧಿ ಪಡಿಸುವ ದೇಯೋದ್ದೇಶಗಳನ್ನು ಹೊಂದಿರುತ್ತದೆ. ಸದರಿ ಜಮೀನು ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ವ್ಯಾಪ್ತಿಯಲ್ಲಿರುತ್ತದೆ.

3. ಕರ್ನಾಟಕ ಭೂ ಮಂಜೂರಾತಿ ನಿಯಮಗಳು 1969ರ ನಿಯಮ 10(2)ರನ್ವಯ ಬೆಂಗಳೂರು ಮಹಾ ನಗರ ಪಾಲಿಕೆ ವ್ಯಾಪ್ತಿಯಲ್ಲಿನ ಹಾಗೂ ಪಾಲಿಕೆ ವ್ಯಾಪ್ತಿಯಿಂದ 16 ಕಿ.ಮೀ. ಅಂತರದಲ್ಲಿರುವ ಸರ್ಕಾರಿ ಜಮೀನನ್ನು ಖಾಸಗಿ ಸಂಸ್ಥೆಗಳಿಗೆ ಮಂಜೂರು ಮಾಡಲು ಅವಕಾಶವಿರುವುದಿಲ್ಲ. ಕರ್ನಾಟಕ ಭೂ ಮಂಜೂರಾತಿ ನಿಯಮಗಳು 1969ರ ನಿಯಮ 27ರಲ್ಲಿನ ಅಧಿಕಾರವನ್ನು ಚಲಾಯಿಸಿ ನಿಯಮಗಳನ್ನು ಸಡಿಲಿಸಲು ಸರ್ಕಾರಕ್ಕೆ ಅಧಿಕಾರವಿರುತ್ತದೆ. ಈ ಜಮೀನಿನಲ್ಲಿ ಈಗಾಗಲೇ ಪಿಳೇಕಮ್ಮ ದೇವಸ್ಥಾನ ಇರುವುದರಿಂದ ಈ ದೇವಸ್ಥಾನವನ್ನು ಅಭಿವೃದ್ಧಿ ಪಡಿಸುವ ಸಲುವಾಗಿ ಪಿಳೇಕಮ್ಮ ಮಹೇಶ್ವರ ಟ್ರಸ್ಟ್ ಇವರು ಮಂಜೂರು ಮಾಡಲು ಕೋರಿರುವುದರಿಂದ ಈ ಜಮೀನನ್ನು ಸದರಿ ಟ್ರಸ್ಟ್‌ಗೆ ಮಂಜೂರು ಮಾಡಲು ಪರಿಶೀಲಿಸಲಾಗಿದೆ.

4. ಮೇಲೆ ಓದಲಾದ ಕ್ರಮ ಸಂಖ್ಯೆ: (2)ರ ದಿನಾಂಕ 26–05–2009ರ ಪತ್ರದಲ್ಲಿ ಪ್ರಶ್ನಿತ ಜಮೀನಿನಲ್ಲಿ ಈಗಾಗಲೇ ಪಿಳೇಕಮ್ಮ ದೇವಸ್ಥಾನವಿರುವುದರಿಂದ ಈ ದೇವಸ್ಥಾನವನ್ನು ಅಭಿವೃದ್ಧಿ ಪಡಿಸುವ ಸಲುವಾಗಿ ಪಿಳೇಕಮ್ಮ ಮಹೇಶ್ವರ ಟ್ರಸ್ಟ್ ಇವರು ಮಂಜೂರು ಮಾಡಲು ಕೋರಿರುವುದರಿಂದ ಈ ಜಮೀನನ್ನು ಸದರಿ ಟ್ರಸ್ಟ್‌ಗೆ ಮಂಜೂರು ಮಾಡಲು ಕೋರಿರುವುದನ್ನು ಪರಿಗಣಿಸಿ ಈ ಜಮೀನನ್ನು ಸದರಿ ಟ್ರಸ್ಟ್‌ಗೆ ಮಂಜೂರು ಮಾಡಲು ನಿರ್ಣಯಿಸಿದೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಆರ್‌ಡಿ 973 ಎಲ್‌ಜಿಬಿ 2008, ಬೆಂಗಳೂರು, ದಿನಾಂಕ : 10–5–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಕರ್ನಾಟಕ ಭೂ ಮಂಜೂರಾತಿ ನಿಯಮಗಳು 1969ರ ನಿಯಮ 27ರಲ್ಲಿನ ಅಧಿಕಾರವನ್ನು ಚಲಾಯಿಸಿ ನಿಯಮ 10(2)ನ್ನು ಸಡಿಲಿಸಿ ಬೆಂಗಳೂರು ದಕ್ಷಿಣ ತಾಲ್ಲೂಕು, ಬೇಗೂರು ಹೋಬಳಿ, ಸಿಂಗಸಂದ್ರ ಗ್ರಾಮದ ಸ.ನಂ. 24ರಲ್ಲಿನ 27 ಗುಂಟೆ ಜಮೀನನ್ನು ಶ್ರೀ ಪಿಳೇಕಮ್ಮ ಮಹೇಶ್ವರ ದೇವಸ್ಥಾನ ಟ್ರಸ್ಟ್ ಇವರಿಗೆ ದೇವಸ್ಥಾನದ ಅಭಿವೃದ್ಧಿಗಾಗಿ ಕರ್ನಾಟಕ ಭೂ ಮಂಜೂರಾತಿ ನಿಯಮಗಳು 1969ರ ನಿಯಮ 21ರನ್ವಯ ಪ್ರಸಕ್ತ ಪೂರ್ಣ ಮಾರುಕಟ್ಟೆ ದರ ಹಾಗೂ ಇನ್ನಿತರ ಶುಲ್ಕಗಳನ್ನು ವಿಧಿಸಿ ಮಂಜೂರು ಮಾಡಲು ಸರ್ಕಾರ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**(ಇ. ಈಶ್ವರ ನಾಯಕ್)**
ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಭೂ.ಮಂ.)

ಪಿ.ಆರ್. 1339

**ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ**

**ವಿಷಯ :** ಕರ್ನಾಟಕ ಸರ್ಕಾರದ ಸಚಿವಾಲಯದ ಕಂದಾಯ ಇಲಾಖೆಯ ಕಾನೂನು ಕೋಶದಲ್ಲಿ ಸೃಜಿಸಲಾಗಿರುವ ಕಾನೂನು ಅಧಿಕಾರಿಗಳ ಹುದ್ದೆಗಳನ್ನು ಮುಂದುವರಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಅದೇಶ ಸಂಖ್ಯೆ: ಸಿಆಸುಇ 408 ಸಅಸೇ 2008, ದಿನಾಂಕ 06-09-2008
2. ಸರ್ಕಾರದ ಅದೇಶ ಸಂಖ್ಯೆ: ಸಿಆಸುಇ 594 ಸಅಸೇ 2009, ದಿನಾಂಕ 03-09-2009
3. ಸರ್ಕಾರದ ಅದೇಶ ಸಂಖ್ಯೆ: ಸಿಆಸುಇ 39 ಸಅಸೇ 2010, ದಿನಾಂಕ 15-06-2011
4. ಕಂದಾಯ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಕಂಇ 26 ಭೂಸಾವ್ಯಾ 2008, ದಿನಾಂಕ 18-4-2011.

**ಪ್ರಸ್ತಾವನೆ :**

ಮೇಲೆ ಕ್ರಮ ಸಂಖೆ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಕಂದಾಯ ಇಲಾಖೆಯಲ್ಲಿ 3 ಕಾನೂನು ಅಧಿಕಾರಿಗಳ ಹುದ್ದೆಗಳನ್ನು ತಾತ್ಕಾಲಿಕವಾಗಿ ದಿನಾಂಕ 05-08-2008 ರಿಂದ ಜಾರಿಗೆ ಬರುವಂತೆ 1 ವರ್ಷದ ಅವಧಿಗೆ ಸೃಜಿಸಲಾಗಿದೆ. ಮೇಲೆ ಕ್ರಮಸಂಖ್ಯೆ (3) ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಮೇಲೆ ಕ್ರಮಸಂಖ್ಯೆ (1) ರಲ್ಲಿ ಸೃಜಿಸಲಾದ 3 ಕಾನೂನು ಅಧಿಕಾರಿಗಳ ಹುದ್ದೆಗಳಲ್ಲಿ 2 ಕಾನೂನು ಅಧಿಕಾರಿಗಳ ಹುದ್ದೆಗಳನ್ನು ದಿನಾಂಕ 1-4-2010 ರಿಂದ 31-3-2011 ರವರೆಗೆ ತಾತ್ಕಾಲಿಕವಾಗಿ ಮುಂದುವರಿಸಲಾಗಿದೆ. ಮೇಲೆ ಕ್ರಮಸಂಖ್ಯೆ (4)ರಲ್ಲಿ ಓದಲಾದ ಅನಧಿಕೃತ ಟಿಪ್ಪಣಿಯಲ್ಲಿ ಕಂದಾಯ ಇಲಾಖೆಯಲ್ಲಿ ಕಾನೂನು ಕೋಶದಲ್ಲಿ ದಿನಾಂಕ 31-3-2011ರ ವರೆಗೆ ಮುಂದುವರೆಸಿರುವ 2 ಕಾನೂನು ಅಧಿಕಾರಿ ಹುದ್ದೆಗಳನ್ನು ಮುಂದುವರಿಸುವುದು ಅವಶ್ಯಕವಾಗಿದೆಯೆಂದು. ಆದ್ದರಿಂದ ಈ ಕಾನೂನು ಕೋಶದ 2 ಕಾನೂನು ಅಧಿಕಾರಿಗಳ ಹುದ್ದೆಗಳನ್ನು ದಿನಾಂಕ 1-4-2011 ರಿಂದ 31-3-2012ರ ವರೆಗೆ ಮುಂದುವರೆಸುವಂತೆ ಕೋರಲಾಗಿದೆ. ಇದನ್ನು ಪರಿಶೀಲಿಸಿದ ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 246 ಸಅಸೇ 2011, ಬೆಂಗಳೂರು, ದಿನಾಂಕ : 13-5-2011**

ಕರ್ನಾಟಕ ಸರ್ಕಾರ ಸಚಿವಾಲಯದ ಕಂದಾಯ ಇಲಾಖೆಯ ಕಾನೂನು ಕೋಶದಲ್ಲಿ ದಿನಾಂಕ 31-03-2011 ರವರೆಗೆ ಮುಂದುವರಿಸಲಾದ 2 ಕಾನೂನು ಅಧಿಕಾರಿಗಳ ಹುದ್ದೆಗಳನ್ನು ದಿನಾಂಕ 01-04-2011 ರಿಂದ ದಿನಾಂಕ 31-03-2012 ರ ವರೆಗೆ ತಾತ್ಕಾಲಿಕವಾಗಿ ಮುಂದುವರಿಸಲಾಗಿದೆ.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ 10-7-1996ರಲ್ಲಿ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಆರ್ಥಿಕ ಇಲಾಖೆಯು ಸಹಮತಿ ನೀಡಿದೆ ಎಂದು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**(ಎ. ಆರ್. ವಿಜಯಾನಂದ ಶರ್ಮ)**
ಸರ್ಕಾರದ ಅಧೀನ ಕಾರ್ಯದರ್ಶಿ
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು-3)

ಪಿ.ಆರ್. 1340

**ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ**

**ವಿಷಯ :** ಕರ್ನಾಟಕ ಸರ್ಕಾರದ ಸಚಿವಾಲಯದಲ್ಲಿ ಹೊಸದಾಗಿ ಸೃಜಿಸಲಾದ ಗ್ರೂಫ್-'ಎ' ವೃಂದದ ಹುದ್ದೆಗಳಿಗೆ ಪೂರಕ ಹುದ್ದೆಗಳನ್ನು ಸೃಜಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 458 ಸಅಸೇ 2008, ದಿನಾಂಕ 25-02-2011
2. ಸರ್ಕಾರದ ಅದೇಶ ಸಂಖ್ಯೆ: ಸಿಆಸುಇ 458 ಸಅಸೇ 2008, ದಿನಾಂಕ 22-03-2011
3. ದಿನಾಂಕ 14-03-2011ರಂದು ಅಪರ ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯ ನಡವಳಿಗಳು.

**ಪ್ರಸ್ತಾವನೆ :**

ಮೇಲೆ ಕ್ರಮ ಸಂಖ್ಯೆ (1) ಮತ್ತು (2)ರಲ್ಲಿ ಓದಲಾದ ಸರ್ಕಾರದ ಆದೇಶಗಳಲ್ಲಿ ಕರ್ನಾಟಕ ಸರ್ಕಾರದ ಸಚಿವಾಲಯದ ವಿವಿಧ ಇಲಾಖೆಗಳಲ್ಲಿ ಹೊಸದಾಗಿ ಸೃಜಿಸಲಾಗಿರುವ ಗ್ರೂಫ್-'ಎ' ವೃಂದದ ಹುದ್ದೆಗಳನ್ನು ಸೃಜಿಸಲಾಗಿದೆ. ಮೇಲೆ ಕ್ರಮ ಸಂಖ್ಯೆ (3)ರಲ್ಲಿ ಓದಲಾದ ನಡವಳಿಯಲ್ಲಿ ಸಚಿವಾಲಯದಲ್ಲಿ ಹೊಸದಾಗಿ ಸೃಜಿಸಲಾದ ಗ್ರೂಫ್-'ಎ' ವೃಂದದ ಹುದ್ದೆಗಳಿಗೆ ಅಗತ್ಯವಾದ ಪೂರಕ ಹುದ್ದೆಗಳನ್ನು ನಿಗಧಿತ ಪ್ರಮಾಣದಲ್ಲಿ ಸೃಜಿಸಲು ತೀರ್ಮಾನಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 190 ಸಅಸೇ 2011, ಬೆಂಗಳೂರು, ದಿನಾಂಕ : 7-5-2011**

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಕರ್ನಾಟಕ ಸರ್ಕಾರ ಸಚಿವಾಲಯದಲ್ಲಿ ಹೊಸದಾಗಿ ಈ ಕೆಳಕಂಡ ಇಲಾಖೆಗಳಲ್ಲಿ ಸೃಜಿಸಲಾಗಿರುವ ಅಪರ ಕಾರ್ಯದರ್ಶಿ/ಜಂಟಿ ಕಾರ್ಯದರ್ಶಿ/ಉಪಕಾರ್ಯದರ್ಶಿ ಮತ್ತು ಅಧೀನ ಕಾರ್ಯದರ್ಶಿ ಹುದ್ದೆಗಳಿಗೆ ಈ ಕಳಕಂಡಂತೆ ಪೂರಕ ಹುದ್ದೆಗಳನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸೃಜಿಸಲಾಗಿದೆ.

**1) ಸಿ.ಆ.ಸು.ಇ. (ಆಡಳಿತ)-ಸರ್ಕಾರದ ಅಪರ ಕಾರ್ಯದರ್ಶಿ**

| | | |
|---|---|---|
| 1 | ಶೀಘ್ರಲಿಪಿಗಾರ | 1 ಹುದ್ದೆ |
| 2 | ಕಿರಿಯ ಸಹಾಯಕ | 1 ಹುದ್ದೆ |
| 3 | ದಲಾಯತ್ | 1 ಹುದ್ದೆ |

**2) ಕೃಷಿ ಇಲಾಖೆ-ಸರ್ಕಾರದ ಜಂಟಿ ಕಾರ್ಯದರ್ಶಿ**

| | | |
|---|---|---|
| 1 | ಶೀಘ್ರಲಿಪಿಗಾರ | 1 ಹುದ್ದೆ |
| 2 | ಕಿರಿಯ ಸಹಾಯಕ | 1 ಹುದ್ದೆ |
| 3 | ದಲಾಯತ್ | 1 ಹುದ್ದೆ |

**3) ವಾಣಿಜ್ಯ ಮತ್ತು ಕೈಗಾರಿಕಾ ಇಲಾಖೆ–ಸರ್ಕಾರದ ಜಂಟಿ ಕಾರ್ಯದರ್ಶಿ**

| | | |
|---|---|---|
| 1 | ಶೀಘ್ರಲಿಪಿಗಾರ | 1 ಹುದ್ದೆ |
| 2 | ಕಿರಿಯ ಸಹಾಯಕ | 1 ಹುದ್ದೆ |
| 3 | ದಲಾಯತ್ | 1 ಹುದ್ದೆ |

**4) ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ–ಸರ್ಕಾರದ ಉಪ ಕಾರ್ಯದರ್ಶಿ**

| | | |
|---|---|---|
| 1 | ಶೀಘ್ರಲಿಪಿಗಾರ | 1 ಹುದ್ದೆ |
| 2 | ಕಿರಿಯ ಸಹಾಯಕ | 1 ಹುದ್ದೆ |
| 3 | ದಲಾಯತ್ | 1 ಹುದ್ದೆ |

**5) ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ–ಸರ್ಕಾರದ ಉಪ ಕಾರ್ಯದರ್ಶಿ**

| | | |
|---|---|---|
| 1 | ಶೀಘ್ರಲಿಪಿಗಾರ | 1 ಹುದ್ದೆ |
| 2 | ಕಿರಿಯ ಸಹಾಯಕ | 1 ಹುದ್ದೆ |
| 3 | ದಲಾಯತ್ | 1 ಹುದ್ದೆ |

**6) ಒಳಾಡಳಿತ ಇಲಾಖೆ–ಸರ್ಕಾರದ ಉಪ ಕಾರ್ಯದರ್ಶಿ**

| | | |
|---|---|---|
| 1 | ಶೀಘ್ರಲಿಪಿಗಾರ | 1 ಹುದ್ದೆ |
| 2 | ಕಿರಿಯ ಸಹಾಯಕ | 1 ಹುದ್ದೆ |
| 3 | ದಲಾಯತ್ | 1 ಹುದ್ದೆ |

**7) ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ–ಸರ್ಕಾರದ ಉಪ ಕಾರ್ಯದರ್ಶಿ**

| | | |
|---|---|---|
| 1 | ಶೀಘ್ರಲಿಪಿಗಾರ | 1 ಹುದ್ದೆ |
| 2 | ಕಿರಿಯ ಸಹಾಯಕ | 1 ಹುದ್ದೆ |
| 3 | ದಲಾಯತ್ | 1 ಹುದ್ದೆ |

**8) ನಗರಾಭಿವೃದ್ಧಿ ಇಲಾಖೆ–ಸರ್ಕಾರದ ಉಪ ಕಾರ್ಯದರ್ಶಿ**

| | | |
|---|---|---|
| 1 | ಶೀಘ್ರಲಿಪಿಗಾರ | 1 ಹುದ್ದೆ |
| 2 | ಕಿರಿಯ ಸಹಾಯಕ | 1 ಹುದ್ದೆ |
| 3 | ದಲಾಯತ್ | 1 ಹುದ್ದೆ |

**9) ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ–ಸರ್ಕಾರದ ಉಪ ಕಾರ್ಯದರ್ಶಿ**

| | | |
|---|---|---|
| 1 | ಶೀಘ್ರಲಿಪಿಗಾರ | 1 ಹುದ್ದೆ |
| 2 | ಕಿರಿಯ ಸಹಾಯಕ | 1 ಹುದ್ದೆ |
| 3 | ದಲಾಯತ್ | 1 ಹುದ್ದೆ |

**10) ಶಿಕ್ಷಣ ಇಲಾಖೆ–ಸರ್ಕಾರದ ಅಧೀನ ಕಾರ್ಯದರ್ಶಿ–1**

| | | |
|---|---|---|
| 1 | ಶೀಘ್ರಲಿಪಿಗಾರ | 1 ಹುದ್ದೆ |

**11) ಶಿಕ್ಷಣ ಇಲಾಖೆ–ಸರ್ಕಾರದ ಅಧೀನ ಕಾರ್ಯದರ್ಶಿ–2**

| | | |
|---|---|---|
| 1 | ಶೀಘ್ರಲಿಪಿಗಾರ | 1 ಹುದ್ದೆ |

**12) ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ವೈದ್ಯಕೀಯ ಶಿಕ್ಷಣ)–ಸರ್ಕಾರದ ಅಧೀನ ಕಾರ್ಯದರ್ಶಿ**

| | | |
|---|---|---|
| 1 | ಶೀಘ್ರಲಿಪಿಗಾರ | 1 ಹುದ್ದೆ |

**13) ಒಳಾಡಳಿತ ಇಲಾಖೆ–ಸರ್ಕಾರದ ಅಧೀನ ಕಾರ್ಯದರ್ಶಿ**

| | | |
|---|---|---|
| 1 | ಶೀಘ್ರಲಿಪಿಗಾರ | 1 ಹುದ್ದೆ |

**14) ನಗರಾಭಿವೃದ್ಧಿ ಇಲಾಖೆ–ಸರ್ಕಾರದ ಅಧೀನ ಕಾರ್ಯದರ್ಶಿ**

| | | |
|---|---|---|
| 1 | ಶೀಘ್ರಲಿಪಿಗಾರ | 1 ಹುದ್ದೆ |

**15) ಸಹಕಾರ ಇಲಾಖೆ–ಸರ್ಕಾರದ ಅಧೀನ ಕಾರ್ಯದರ್ಶಿ**

| | | |
|---|---|---|
| 1 | ಶೀಘ್ರಲಿಪಿಗಾರ | 1 ಹುದ್ದೆ |

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 360/ವೆಚ್ಚ–12/2011, ದಿನಾಂಕ 18–4–2011ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**(ಎ. ಆರ್. ವಿಜಯಾನಂದ ಶರ್ಮ)**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 1341 ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು–3)